# ಶೂದ್ರ

ಬೆಲೆ : 1/-ರೂ



ಈ ಸಂಚಿಕೆಯಲ್ಲಿ:

ಟಿ. ಪಿ. ಅಶೋಕ ಆಲ್ಬರ್ಟೋ ಮೊರಾವಿಯಾ ಬಿ. ಡಿ. ನಾಗನೋತಿ
ವೇಣು ಗೋಪಾಲ ಸೊರಬ ಪುರುಷೋತ್ತಮ ಕ್ಷೀರಸಾಗರ ಬಿ. ರಾಜಣ್ಣ
ಬಚ್ಚು ರಾಯ್ ಚೌಧರಿ ಚೆನ್ನವೀರ ಕಣವಿ

ಪ್ರೇಮಚಂದ್—ನಿದ್ದೆಗಣ್ಣಿನಲ್ಲಿ ಕಟ್ಟೀಮನಿ—ಅಮೃತ್ ರಾಯ್ ಸಂದರ್ಶನ
ಮತ್ತು ಕಫನ್ ನಾಟಕ

ಶೂದ್ರ

ಸಂಪುಟ : 5 ಸೆಪ್ಟಂಬರ್ 1980 ಸಂಚಿಕೆ : 11

ಸಹಾಯಕ ಸಂಪಾದಕರು : ಪದ್ಮರಾಜ ದಂಡಾವತಿ
ಗೋ. ಶ್ರೀನಿವಾಸ್
ನಿರ್ಮಲ. ಎಸ್. ರೆಡ್ಡಿ
ಪುರುಷೋತ್ತಮ. ಎ

ಮುಖ ಚಿತ್ರ : ಅನಾಮಧೇಯ—ಸಂದರ್ಶನ ಲೇಖನ ನೋಡಿ.

ಶೂದ್ರಕ್ಕೆ ನಿಮ್ಮ ಪ್ರೀತಿ–ದ್ವೇಷಗಳ ನಡುವೆ ಎಂಟು ವರ್ಷಗಳು ತುಂಬಿತು. ಇಲ್ಲಿಯ ತನಕ ನೀವು ನೀಡಿರುವ ಸಹಕಾರಕ್ಕೆ ಋಣಿಯಾಗಿದ್ದೇವೆ. ಮುಂದೆಯೂ ಶೂದ್ರ ಚೆನ್ನಾಗಿ ಬರಬೇಕಾಗಿದೆ. ದಯವಿಟ್ಟು ಚಂದಾ ಕಳಿಸಿಕೊಡಿ. ಶೂದ್ರ ಅಕ್ಟೋಬರ್ ಸಂಚಿಕೆ ನವೆಂಬರ್ 10ರಂದು ವಿಶೇಷಾಂಕವಾಗಿ ಬರುವುದು. ಸಹಕರಿಸಿ.

—ಸಂ.

ಶೂದ್ರ ಶ್ರೀನಿವಾಸ್,
ಸುದ್ದುಗುಂಟೇಪಾಳ್ಯ,
ಡಿ. ಆರ್. ಕಾಲೇಜ್ ಪೋಸ್ಟ್,
ಬೆಂಗಳೂರು–560 029.

**ವಾರ್ಷಿಕ ಚಂದಾ 12 ರೂ.**

(ಬೆಂಗಳೂರು ನಗರ ವಲಯ ಬಿಟ್ಟು ಹೊರಗಿನಿಂದ ಚೆಕ್ ಕಳಿಸುವವರು ದಯವಿಟ್ಟು 13ರೂ ರೂ.ಗೆ ಚೆಕ್ ಬರೆಯಿರಿ)

# ಸಾರ್ತ್ರ್, ಸ್ವಾತಂತ್ರ್ಯ ಮತ್ತು ಸಾಹಿತ್ಯ

—ಟಿ. ಪಿ. ಅಶೋಕ

ಲೇಖಕರು ಮಾನವ ಸ್ವಾತಂತ್ರ್ಯಕ್ಕೆ ಬದ್ಧರಾಗಿ ಬರೆಯಬೇಕೆಂದು ಸಾರ್ತ್ರ್ ಅಪೇಕ್ಷಿಸುತ್ತಾನೆ. ಸಹಜವಾಗಿಯೆ ಸಾರ್ತ್ರನ ಮಾನವ ಸ್ವಾತಂತ್ರ್ಯದ ಕಲ್ಪನೆಯು ಬದ್ಧತೆಯ ಅವಶ್ಯಕತೆಯನ್ನೂ, ಬದ್ಧ ಸಾಹಿತ್ಯದ ಒಪ್ಪಿಗೆಯನ್ನು ಸೂಚಿಸುತ್ತದೆ. ಲೇಖಕರು ತಮಗೋಸ್ಕರವಾಗಿಯೇ ಬರೆದುಕೊಳ್ಳುತ್ತಾರೆ ಎಂಬ ಮಾತನ್ನು ಅವನು ಒಪ್ಪುವುದಿಲ್ಲ. ಏಕೆಂದರೆ ಸೃಷ್ಟಿಕ್ರಿಯೆಯು ಕೃತಿರಚನೆಯ ಒಂದು ಅಪೂರ್ಣ, ಅಮೂರ್ತಗಳಿಗೆಯಷ್ಟೇ ಆಗಿರುತ್ತದೆ. ಓದುಗನೊಬ್ಬ ಅದನ್ನು ಓದಿದಾಗಲೇ ಈ ಕ್ರಿಯೆಯು ಪೂರ್ಣವಾಗುವುದು. ಆದ್ದರಿಂದ ಬರವಣಿಗೆಯು ಓದುವುದನ್ನು ತನ್ನ ತಾರ್ಕಿಕ ಪ್ರತಿರೂಪ (Dialectical Correlative) ವಾಗಿ ಒಳಗೊಂಡಿರುತ್ತದೆ. ಹೀಗಾಗಿ ಈ ಒಟ್ಟು ಕ್ರಿಯೆಯ ಒಂದು ತುದಿಯಲ್ಲಿ ಬರಹಗಾರನೂ ಮತ್ತೊಂದು ತುದಿಯಲ್ಲಿ ಓದುಗನೂ ಇರುತ್ತಾರೆ. ಲೇಖಕ ಮತ್ತು ಓದುಗ ಇವರಿಬ್ಬರ ಜಂಟಿ ಪ್ರಯತ್ನದಿಂದಲೇ ಕೃತಿ ಫಲಿಸುವುದು ; ಅದಕ್ಕೆ ಒಂದು ಅರ್ಥ ಲಭ್ಯವಾಗುವುದು. ಓದುವುದು ಗ್ರಹಿಕೆ ಮತ್ತು ಸೃಷ್ಟಿಯನ್ನು ಸಂಯೋಜಿಸುವ ಕ್ರಿಯೆ. ಲೇಖಕ ಪ್ರಾರಂಭಿಸಿದ್ದನ್ನು ಓದುಗ ಪೂರೈಸುತ್ತಾನೆ ; ತನ್ನ ಸಾಮರ್ಥ್ಯಕ್ಕನುಣವಾಗಿ ಕೃತಿಯನ್ನು ವಿಸ್ತರಿಸಿಕೊಳ್ಳುತ್ತ ಹೋಗುತ್ತಾನೆ. ಇದು ಕೂಡ ಒಂದು ರೀತಿಯಲ್ಲಿ ಸೃಷ್ಟಿಕ್ರಿಯೆಯೇ ಎಂದು ಸಾರ್ತ್ರ್ ಅಭಿಪ್ರಾಯ ಪಡುತ್ತಾನೆ. ಆದ್ದರಿಂದ ಲೇಖಕನೊಬ್ಬನೇ 'ಪರಮ'ವಾದದ್ದನ್ನು ಸೃಷ್ಟಿಸಿಬಿಡುತ್ತಾನೆಂದು ಹೇಳಲಾಗದು. ಲೇಖಕನ ಕೃತಿಯು ಓದುಗನಿಂದಲೇ ಪೂರ್ಣಗೊಳ್ಳಬೇಕು ; ವಿವಿಧ ಸಾಧ್ಯತೆಗಳನ್ನು ಗಳಿಸಿಕೊಳ್ಳಬೇಕು. ಹೀಗಾಗಿ ಎಲ್ಲ ಬರವಣಿಗೆಯೂ ಒಂದು 'ಮನವಿ' ಎಂದು ಸಾರ್ತ್ರ್ ವಿಶ್ಲೇಷಿಸುತ್ತಾನೆ, ಲೇಖಕ ತಾನು ಪ್ರಾರಂಭಿಸಿದ್ದನ್ನು ಓದುಗ ಮುಂದುವರಿಸಿಕೊಂಡು ಹೋಗುವಂತೆ ಮನವಿ. ಏಕೆಂದರೆ ತಾನು ನಿಯೋಜಿಸಿದ ಕೃತಿ 'ಹೀಗೇ'ಆಗುತ್ತದೆ ಎಂದು ಲೇಖಕ ಹೇಳಲಾರ. ವೈಯಕ್ತಿಕ

ಅನುಭವ, ಅಭಿಪ್ರಾಯಗಳಿಂದ ನಿರ್ದೇಶಿತವಾಗುವ ಆತ್ಮನಿಷ್ಠೆಯನ್ನು ಸಂಪೂರ್ಣವಾಗಿ ತೊಡೆದುಕೊಳ್ಳಲಾರ. ಹೀಗಾಗಿ ಅವನ ಕೃತಿಗೆ ವಸ್ತುನಿಷ್ಠತೆ ಲಭ್ಯವಾಗುವುದು ಓದುಗನಿಂದ ಮಾತ್ರ. ಏಕೆಂದರೆ ಕೃತಿರಚನೆಯ ಕಾಲದಲ್ಲಿ ಲೇಖಕನ ಮನಸ್ಸಿನಲ್ಲಿರುವ ವಿಚಾರಗಳು ಕೃತಿಯನ್ನು ಓದಲು ತನ್ನೆದುರು ಇಟ್ಟುಕೊಳ್ಳುವ ಓದುಗನಲ್ಲಿ ಪ್ರಜ್ಞಾಪೂರ್ವಕವಾಗಿ ಇರುವುದಿಲ್ಲ. ಅಂದರೆ ಓದುಗ ಕೃತಿರಚನೆಯ ಹಿಂದಿನ ಪ್ರೇರಣೆಗಳಿಂದ ಸ್ವತಂತ್ರನಾಗಿರುತ್ತಾನೆ. ಆದ್ದರಿಂದಲೇ ಲೇಖಕ ಪ್ರಾರಂಭಿಸಿದ್ದು ನಿಜವಾಗಿ ಪೂರ್ಣಗೊಳ್ಳುವುದು ಓದುಗನಿಂದ; ಓದುಗನ ಸ್ವಾತಂತ್ರ್ಯದಿಂದ; ಆ ಸ್ವಾತಂತ್ರ್ಯದಲ್ಲಿನ ಅತ್ಯಂತ ಶುದ್ಧ ಅಂಶಗಳಿಂದ. ಲೇಖಕ ಮನವಿ ಮಾಡಿಕೊಳ್ಳುವುದೂ ಓದುಗನ ಈ ಸ್ವಾತಂತ್ರ್ಯಕ್ಕೇ. ಆದ್ದರಿಂದ ಒಂದು ಅರ್ಥದಲ್ಲಿ ಕೃತಿಯು ಓದುಗನಿಗೆ ಸ್ವಾತಂತ್ರ್ಯವನ್ನು ತಂದುಕೊಡುವುದಿಲ್ಲ; ಓದುಗನ ಸ್ವಾತಂತ್ರ್ಯವನ್ನು ಬಯಸುತ್ತದೆ ಎಂದು ಸಾರ್ತ್ರ್ ವಾದಿಸುತ್ತಾನೆ. ಇದನ್ನು ಒಂದು ಉದಾಹರಣೆಯ ಮೂಲಕ ಸ್ವಾರ್ತ್ ಸ್ಪಷ್ಟಪಡಿಸುತ್ತಾನೆ. ಒಂದು ಸುತ್ತಿಗೆಯನ್ನು ಉಪಯೋಗಿಸುವುದಕ್ಕೆ ಮುಂಚೆ ನಮಗೆ ಅದರ ಕಾರ್ಯವಿಧಾನ ಮತ್ತು ಪರಿಣಾಮಗಳ ಬಗ್ಗೆ ಗೊತ್ತಿರುತ್ತದೆ. ಅದನ್ನು ಹೇಗೆ ಉಪಯೋಗಿಸಿಕೊಳ್ಳಬೇಕೆಂಬುದನ್ನು ಮೊದಲೇ ನಿಯೋಜಿಸಿಕೊಂಡಿರುತ್ತೇವೆ. ಅಂದರೆ ಅದನ್ನು ಎತ್ತಿ ಮೊಳೆಯ ಮೇಲೆ ಬಡಿಯುವಾಗ ಇಲ್ಲವೇ ಒಬ್ಬನ ತಲೆಯ ಮೇಲೆ ಕುಟ್ಟುವಾಗ ನಾನು ನನ್ನ ಸ್ವಾತಂತ್ರ್ಯದೊಡನೆ ಮುಖಾಮುಖಿಯಾಗುವುದಿಲ್ಲ; ಸುತ್ತಿಗೆಯ ಪರಂಪರಾಗತ ಉಪಯೋಗಗಳಲ್ಲಿ ಒಂದನ್ನು ಬಳಸಿಕೊಳ್ಳುತ್ತೇನಷ್ಟೇ. ಅಂದರೆ ಸುತ್ತಿಗೆಯನ್ನು ಅದರ ಈಗಾಗಲೇ ನಿರೂಪಿಸಲ್ಪಟ್ಟ ಉಪಯೋಗಗಳಲ್ಲಿ ಮಾತ್ರ ನನ್ನ ಕ್ರಿಯೆಯಲ್ಲಿ ಬಳಸಿಕೊಳ್ಳುತ್ತೇನೆ. ಆದರೆ ಒಂದು ಸಾಹಿತ್ಯ ಕೃತಿಗೆ ಇಂಥ ಅಸದೃಶ ಗುಣ ಇರುವುದಿಲ್ಲ. ಆದ್ದರಿಂದಲೇ ಅದು ಒಂದು ನಿರ್ದಿಷ್ಟ ಗುರಿಗೆ ಮಾರ್ಗವಾಗಲಾರದು—ಸುತ್ತಿಗೆಯಂತೆ. ಓದುಗನ ಸ್ವಾತಂತ್ರ್ಯಕ್ಕಷ್ಟೇ ಅದು ತನ್ನನ್ನು ತಾನು ಕೊಟ್ಟುಕೊಳ್ಳಬಲ್ಲುದು. ಅಂದರೆ ಕೃತಿ ನನ್ನ ಮುಂದೆ ಇದೆ; ಆದರೆ ಅದರ ಅಂತ್ಯ ಪೂರ್ವನಿರ್ಧರಿತವಲ್ಲ. ಅದನ್ನು ಓದಲು ಪ್ರಾರಂಭಿಸುತ್ತಿದ್ದಂತೆ ಹೆಚ್ಚಿನ ಜವಾಬ್ದಾರಿ ಬೀಳುತ್ತದೆ ಅಷ್ಟೆ. ಏಕೆಂದರೆ ಕೇವಲ ವೈಯುಕ್ತಿಕ ನೆಲೆಯಲ್ಲಿ ಸ್ವಾತಂತ್ರ್ಯವನ್ನು ಅನುಭವಿಸಲಾಗದು; ಬೇರೊಂದು ಶಕ್ತಿಯೊಡನೆ ಮುಖಾಮುಖಿಯಾದಾಗಲೇ ಸ್ವಾತಂತ್ರ್ಯದ ನಿಜವಾದ ಸ್ವರೂಪ ಗೊತ್ತಾಗುವುದು.

ನಾನು ಪ್ರಾರಂಭಿಸಿದ ಕಾರ್ಯವನ್ನು ನೀನು ಮುಂದುವರಿಸಿಕೊಂಡು ಹೋಗು ಎಂದು ಓದುಗನಿಗೆ ಮನವಿ ಮಾಡಿಕೊಳ್ಳುವಾಗ ಓದುಗನ ಸ್ವಾತಂತ್ರ್ಯವು ಶುದ್ಧ ಸ್ವಾತಂತ್ರ್ಯವೆಂದೂ, ಅಧೀನಕ್ಕೊಳಪಟ್ಟದ್ದಲ್ಲವೆಂದೂ ನನಗೆ ಗೊತ್ತಿರುತ್ತದೆ ಎಂದು ಸಾರ್ತ್ರ್ ಹೇಳುತ್ತಾನೆ. ಅಂದರೆ ಲೇಖಕ ಓದುಗನ ನಿರ್ಲಿಪ್ತತೆಯನ್ನು ಭಂಗಪಡಿಸಲು

ಅವನಲ್ಲಿ ಕೋಪ, ಭಯ, ಪ್ರೇಮವನ್ನು ಉದ್ರೇಕಿಸಲು ಬರೆಯುವುದಿಲ್ಲ. ಕೆಳದರ್ಜೆಯ ಲೇಖಕರು ಮಾತ್ರ ಹೀಗೆ ಮಾಡಬಹುದಷ್ಟೆ. ಏಕೆಂದರೆ ಭಾವೋದ್ರೇಕದಲ್ಲಿ ಸ್ವಾತಂತ್ರ್ಯ ಅನಾಥವಾಗುತ್ತದೆ; ಪರಿಪೂರ್ಣತೆ ಸಾಧ್ಯವಾಗದೆ ಎಲ್ಲವೂ ಭಾಗಶಃ ಎಂಬಂತೆ ನಡೆದು ಹೋಗುತ್ತದೆ. ಆಗ ಕೃತಿಯು ದ್ವೇಷ ಇಲ್ಲವೇ ಕಾಮವನ್ನು ಕೆರಳಿಸುವ ಕೇವಲ ಒಂದು ಸಾಧನದ ಮಟ್ಟಕ್ಕೆ ಇಳಿದು ಬಿಡುತ್ತದೆ. ತನ್ನ ಕಾರ್ಯವನ್ನು ಪೂರ್ಣಗೊಳಿಸುವಂತೆ ಮಾತ್ರ ಲೇಖಕ ಬೇಡಿಕೊಳ್ಳಬೇಕೇ ಹೊರತು ಭಾವಪರವಶತೆಯನ್ನು ಉಂಟು ಮಾಡಬಾರದು. ಕೃತಿಗೆ ಪೂರಕವಾದ ಪಾತ್ರಗಳನ್ನು ಶುದ್ಧವಾಗಿ ನಿಯೋಜಿಸಬೇಕು. ಓದುಗನಿಗೆ ಯಾವ ಮೋಡಿಯನ್ನೂ ಹಾಕದೆ ಆತ ಸೌಂದರ್ಯೋಪಾಸಕ ಅಂತರವನ್ನು ಕಾಯ್ದುಕೊಳ್ಳುವ ಅವಕಾಶವನ್ನು ನೀಡಬೇಕು. ಇದನ್ನು 'ಕಲೆಗಾಗಿ ಕಲೆ' ವಾದವೆಂದು ತಪ್ಪು ತಿಳಿಯಬಾರದೆಂದು ಸಾರ್ತ್ರ್ ಎಚ್ಚರಿಸುತ್ತಾನೆ. ಇದೊಂದು ಎಚ್ಚರಿಕೆ ಮಾತ್ರ ಎಂದು ಅವನು ಒತ್ತಿ ಹೇಳುತ್ತಾನೆ. ಹೀಗೆ ಎಂದಾಗ ಲೇಖಕ ಯಾವುದೋ ಕಲ್ಪನಾತ್ಮಕ, ಅಮೂರ್ತ ಸ್ವಾತಂತ್ರ್ಯಕ್ಕೆ ಮನವಿ ಮಾಡಿಕೊಳ್ಳುತ್ತಿದ್ದಾನೆಂದು ಅರ್ಥವಲ್ಲ. ತನ್ನ ಕೃತಿಯ ಅಸ್ತಿತ್ವಕ್ಕಾಗಿ ಓದುಗನ ಸ್ವಾತಂತ್ರ್ಯವನ್ನು ಬೇಡುವ ಲೇಖಕ ಅಷ್ಟಕ್ಕೇ ನಿಲ್ಲುವುದಿಲ್ಲ. ತಾನು ಓದುಗನ ಸ್ವಾತಂತ್ರ್ಯದಲ್ಲಿ ಇಟ್ಟಿರುವ ನಂಬಿಕೆಯನ್ನು ಆತ ತನ್ನ ಸೃಜನಶೀಲ ಸ್ವಾತಂತ್ರ್ಯವನ್ನು ಗುರುತಿಸುವುದರ ಮೂಲಕ ಹಿಂದಿರುಗಿಸಬೇಕೆಂದು ಲೇಖಕ ಬಯಸುತ್ತಾನೆ. ಹೀಗಾಗಿ ಮೇಲ್ನೋಟಕ್ಕೆ ಓದುವುದರಲ್ಲಿ ಒಂದು ತಾರ್ಕಿಕ ವಿರೋಧಾಭಾಸ ಇದೆ. ನಾವು ನಮ್ಮ ಸ್ವಾತಂತ್ರ್ಯವನ್ನೂ ಹೆಚ್ಚು ಹೆಚ್ಚಾಗಿ ಅನುಭವಿಸುತ್ತ ಹೋಗುತ್ತೇವೆ. ನಮ್ಮಿಂದ ಏನನ್ನು ಬೇಡಲಾಗಿತ್ತೋ ಅದನ್ನೇ ನಾವೂ ವಿಪರ್ಯಯ ಕ್ರಮದಲ್ಲಿ ಬೇಡುತ್ತೇವೆ. ಈ ರೀತಿಯಲ್ಲಿ ಬರೆಯುವುದು ಮತ್ತು ಓದುವುದು ಒಂದು ಸಮಗ್ರ ಕ್ರಿಯೆಯ ಪರಸ್ಪರಾನುರೂಪತೆಯ ಅಂಶಗಳಾಗಿರುತ್ತವೆ. ಈ ಕ್ರಿಯೆಯಲ್ಲಿ ಪರಸ್ಪರ ನಂಬಿಕೆಯಿದೆ; ಮತ್ತೊಬ್ಬರ ಸ್ವಾತಂತ್ರ್ಯವನ್ನು ಏಕಪಕ್ಷೀಯವಾಗಿ ಬಳಸಿಕೊಳ್ಳುವ ಧಾರ್ಷ್ಟ್ಯವಿಲ್ಲ. ಏಕೆಂದರೆ ಇಬ್ಬರೂ ಸ್ವತಂತ್ರವಾಗಿ ಆರಿಸಿಕೊಳ್ಳಬಲ್ಲವರಾಗಿರುತ್ತಾರೆ. ಹೀಗಾಗಿ ನನ್ನ ಸ್ವಾತಂತ್ರ್ಯ ತಾನೇ ತಾನು ಹೊರ ಹೊಮ್ಮುವಂತೆ ಇತರರ ಸ್ವಾತಂತ್ರ್ಯವನ್ನೂ ಪ್ರಕಾಶಪಡಿಸುತ್ತದೆ. ಎಲ್ಲ ಕಲಾತ್ಮಕ ಸೃಷ್ಟಿಯ ಹಿಂದಿನ ಪ್ರೇರಣೆ ಇದೇ.

ಸಾಹಿತ್ಯ ಮತ್ತು ನೀತಿ ಬೇರೆ ಬೇರೆಯಾಗಿದ್ದರೂ ಕಲಾತ್ಮಕ ಅಗತ್ಯದ ಗರ್ಭದಲ್ಲೇ ನೈತಿಕ ಅಗತ್ಯವೂ ಅಂತರ್ಗತವಾಗಿರುವುದನ್ನು ನಾವು ಗಮನಿಸುತ್ತೇವೆ ಏಕೆಂದರೆ ಸಂವಹನ ಕ್ರಿಯೆಯಲ್ಲಿ ಲೇಖಕ ಮತ್ತು ಓದುಗ ಪರಸ್ಪರರ ಸ್ವಾತಂತ್ರ್ಯವನ್ನು ಗುರುತಿಸಿದಾಗ ಮತ್ತು ಗೌರವಿಸಿದಾಗ ಅದರಲ್ಲಿ ಒಟ್ಟಾರೆ ಮನುಷ್ಯಕುಲದ ಸ್ವಾತಂತ್ರ್ಯವನ್ನೇ ಗುರುತಿಸುವ ಕ್ರಿಯೆಯೂ ಅಡಕವಾಗಿರುತ್ತದೆ. ವಿಶ್ವದೊಂದಿಗಿನ ನಮ್ಮ ಸಂಬಂಧದ ಅವಶ್ಯಕತೆಯನ್ನು ನಿಜಗೊಳಿಸಿಕೊಳ್ಳಲು ನಾವು ಸದಾ

ಪ್ರಯತ್ನಿಸುತ್ತಿರುತ್ತೇವೆ. ಲೇಖಕ ಪ್ರಪಂಚದ ಅನ್ಯಾಯಗಳನ್ನು ಬಿಚ್ಚಿ ತೋರಿಸುತ್ತಿದ್ದಂತೆ ಆ ಸ್ಥಿತಿಗೆ ಇನ್ನೂ ತೀವ್ರವಾಗಿ ತೆರೆದುಕೊಳ್ಳುವ ನಾವೂ ಅವೆಲ್ಲಕ್ಕೆ ಜವಾಬುದಾರರು ಎಂಬ ಅರಿವಿಗೆ ಬರುತ್ತೇವೆ. ಲೇಖಕ ಪ್ರಪಂಚವನ್ನು ಅದರ ಎಲ್ಲ ಅನ್ಯಾಯಗಳೊಂದಿಗೆ ನಮ್ಮ ಎದುರಿಗೆ ತೆರೆದಿಟ್ಟಾಗ ನಾವು ಸುಮ್ಮನೆ ಕೂರುವುದಿಲ್ಲ ; ಅದಕ್ಕೆ ನಮ್ಮ ಕಿಚ್ಚನ್ನೂ ಸೇರಿಸುತ್ತೇವೆ. ಅಂದರೆ ಲೇಖಕನ ಪ್ರಪಂಚವು ಓದುಗನ ಪರೀಕ್ಷೆಗೆ, ಸಿಟ್ಟಿಗೆ, ಮೆಚ್ಚುಗೆಗೆ ಬಿಚ್ಚಿಕೊಳ್ಳುತ್ತದೆ. ಓದುಗ ಕೆರಳುವುದಾದರೂ ಈ ಎಲ್ಲ ಅನ್ಯಾಯಗಳನ್ನೂ ಧಿಕ್ಕರಿಸಿದ ಧನಾತ್ಮಕ ಬದಲಾವಣೆಗಾಗಿ. ಆದ್ದರಿಂದಲೇ ಲೇಖಕನೊಬ್ಬ ತನ್ನ ಕೃತಿಯನ್ನು ಓದುಗನ ಮುಂದಿಟ್ಟಾಗ ಒಟ್ಟಾರೆ ಮಾನವ ಕುಲದ ಸ್ವಾತಂತ್ರ್ಯವನ್ನೇ ಕೋರುತ್ತಿರುತ್ತಾನೆ. ಈ ಕಾರಣದಿಂದಾಗಿ ಇಂಥ ಕೃತಿಗಳು 'ನಿರಾಶೆ ಹುಟ್ಟಿಸುವ' ಸಾಹಿತ್ಯವಾಗಿರುವುದಿಲ್ಲ, ಏಕೆಂದರೆ ಲೇಖಕ ಪ್ರಪಂಚವನ್ನು ಎಷ್ಟೇ ಭೀಕರವಾಗಿ ಚಿತ್ರಿಸಲಿ ಸ್ವತಂತ್ರ ಮನುಷ್ಯ ತನ್ನ ಸ್ವಾತಂತ್ರ್ಯವನ್ನು ಅರಿತುಕೊಳ್ಳಲಿ ಎಂದೇ ಹಾಗೆ ಮಾಡುತ್ತಾನೆ. ಈ ದೃಷ್ಟಿಯಿಂದ ನೋಡಿದಾಗ ಎರಡೇ ಬಗೆಯ ಕೃತಿಗಳಿರುತ್ತವೆ : ಒಳ್ಳೆಯವು ಮತ್ತು ಕೆಟ್ಟವು, ಕೆಟ್ಟ ಕೃತಿಗಳು ಹೊಗಳಿ, ಹಾಡಿ, ನಮ್ಮನ್ನು ತೃಪ್ತಿಪಡಿಸುವ ಗುರಿಯನ್ನು ಹೊಂದಿರುತ್ತವೆ. ಒಳ್ಳೆಯ ಕೃತಿಗಳು ನಮ್ಮ ನಂಬಿಕೆಗಳನ್ನು ಗಟ್ಟಿಗೊಳಿಸುವ ಅಗತ್ಯಗಳಾಗಿರುತ್ತವೆ. ಆದರೆ ಇವೆಲ್ಲಕ್ಕಿಂತ ಹೆಚ್ಚಾಗಿ ಲೇಖಕ ಸ್ವತಂತ್ರ ಓದುಗರ ಮುಂದೆ ತನ್ನ ಸೃಷ್ಟಿ ಪ್ರಪಂಚವನ್ನು ಮಂಡಿಸುವುದು ಆ ಪ್ರಪಂಚಕ್ಕೆ ಇನ್ನೂ ಹೆಚ್ಚಿನ ಸ್ವಾತಂತ್ರ್ಯವನ್ನು ತಂದುಕೊಡುವ ಉದ್ದೇಶದಿಂದ. ಏಕೆಂದರೆ ಲೇಖಕ ಬಹಿರಂಗಗೊಳಿಸಿದ್ದನ್ನು ಓದುಗ ಸೃಷ್ಟಿಸುತ್ತಾನೆ. ಹೀಗಾಗಿ ಕೃತಿಯ ಆಶಯಗಳು ವಿಸ್ತೃತಗೊಳ್ಳುತ್ತಾ ಹೋಗುತ್ತವೆ. ಒಬ್ಬ ನೀಗ್ರೋ ಬರಹಗಾರ ಬಿಳಿಯರ ಬಗ್ಗೆ ಸಿಟ್ಟಿನಿಂದ ಬರೆಯುತ್ತಾನೆ ಎಂದು ಕೊಳ್ಳೋಣ, ಕೃತಿಯುದ್ದಕ್ಕೂ ಬಿಳಿಯರ ಬಗ್ಗೆ ದ್ವೇಷಭಾವನೆಯೆ ಹಬ್ಬಿಕೊಂಡಿದ್ದರೂ ಅದೊಂದು ಒಳ್ಳೆಯ ಕೃತಿಯಾಗಿರಬಹುದು. ಏಕೆಂದರೆ ಈ ದ್ವೇಷದ ಮೂಲಕವೇ ಅವನು ತನ್ನ ಜನಾಂಗದ ಸ್ವಾತಂತ್ರ್ಯಕ್ಕಾಗಿ ಒತ್ತಾಯಿಸುತ್ತಿರುತ್ತಾನೆ. ನಾನೊಬ್ಬ ಸ್ವತಂತ್ರ ಓದುಗನಾಗಿದ್ದಲ್ಲಿ ಶೋಷಕರ ಸಮಾಜದೊಂದಿಗೆ ನನ್ನನ್ನು ನಾನು ಗುರುತಿಸಿಕೊಳ್ಳಲು ಇಚ್ಛಿಸುವುದಿಲ್ಲ. ಹೀಗಾಗಿ ಓದುಗನಾಗಿ ನಾನೂ ಇಂಥವರ ಸ್ವಾತಂತ್ರ್ಯಕ್ಕಾಗಿ ಒತ್ತಾಯಿಸುತ್ತೇನೆ. ಶ್ವೇತವರ್ಣೀಯರಿಂದ ಕಪ್ಪು ಜನರ ವಿಮೋಚನೆಗಾಗಿ ಒತ್ತಾಯಿಸುತ್ತೇನೆ. ಶೋಷಕ ಸಮಾಜದ ಭಾಗವಾಗಿರುವಷ್ಟಕ್ಕೆ ನನ್ನ ಮೇಲೆ ನಾನೇ ತಿರುಗಿ ಬೀಳುತ್ತೇನೆ. ನನ್ನ ಸ್ವಾತಂತ್ರ್ಯವು ಇಡೀ ಮಾನವ ಜನಾಂಗದ ಸ್ವಾತಂತ್ರ್ಯದೊಂದಿಗೆ ಸಂಬಂಧವನ್ನು ಹೊಂದಿರುತ್ತದೆ. ಇಡೀ ಮಾನವ ಜನಾಂಗ ಸ್ವತಂತ್ರವಾಗದೆ ನನಗೆ ಪೂರ್ಣಸ್ವಾತಂತ್ರ್ಯವಿಲ್ಲ. ಆದ್ದರಿಂದಲೇ ಶೋಷಣೆಯ ವಿರುದ್ಧ, ಗುಲಾಮಗಿರಿಯ ವಿರುದ್ಧ ಪ್ರತಿಭಟಿಸುವುದು ನನಗೆ ಅನಿವಾರ್ಯವಾಗಿರುತ್ತದೆ. ಆದ್ದರಿಂದ ಲೇಖಕ ಯಾರೇ ಆಗಿರಲಿ—ಅವನೊಬ್ಬ ಪ್ರಬಂಧಕಾರ

ನಾಗಿರಬಹುದು, ಪಾಂಫ್ಲೆಟ್ ಬರೆಯುವನಾಗಿರಬಹುದು, ಕಾದಂಬರಿಕಾರನಾಗಿರಬಹುದು, ವಿಡಂಬನಕಾರನಾಗಿರಬಹುದು—ಸ್ವತಂತ್ರ ಲೇಖಕನಾಗಿ ಸ್ವತಂತ್ರ ಓದುಗನಿಗಾಗಿ ಬರೆಯುವಾಗ ಅವನಿಗೆ ಇರುವ ವಸ್ತು ಒಂದೇ—ಸ್ವಾತಂತ್ರ್ಯ. ಏಕೆಂದರೆ ಬರಹಗಾರನಾಗಿ ಅವನ ಹೊಣೆ ಗುರುತರವಾದದ್ದು. ಒಬ್ಬ ಕಮ್ಮಾರ ಮನುಷ್ಯನಾಗಿ ಫ್ಯಾಸಿಸ್ಟ್ ಆಗಬಹುದು; ಆದರೆ ಕಮ್ಮಾರನಾಗಿ—ತನ್ನ ಕಬ್ಬಿಣ ಕುಟ್ಟುವ ಕಲೆಯಲ್ಲಿ ಫ್ಯಾಸಿಸ್ಟ್ ಆಗಲಾರ. ಆದರೆ ಒಬ್ಬ ಲೇಖಕ ಎರಡೂ ಕಡೆ ಫ್ಯಾಸಿಸ್ಟ್ ಆಗಲು ಅವಕಾಶಗಳಿರುತ್ತವೆ. ಆದ್ದರಿಂದ ಬರವಣಿಗೆಯ ಒಟ್ಟು ಗುರಿ ಮಾನವ ಸ್ವಾತಂತ್ರ್ಯ ಮತ್ತು ಪ್ರಜಾ ಪ್ರಭುತ್ವ ಎಂಬುದನ್ನು ನಾವು ಮರೆಯಬಾರದು. ಒಂದಕ್ಕೆ ಬೆದರಿಕೆ ಉಂಟಾದರೆ ಮತ್ತೊಂದಕ್ಕೂ ಅಪಾಯವಿದೆ ಎಂದೇ ತಿಳಿಯಬೇಕು. ಇದನ್ನೆಲ್ಲ ಲೇಖನಿಯೊಂದೇ ಸಾಧಿಸುತ್ತದೆ ಎಂದೇನೂ ಇಲ್ಲ. ಲೇಖಕರು ತಮ್ಮ ಲೇಖನಿಗಳನ್ನು ಬದಿಗೊಗೆದು ಆಯುಧಗಳನ್ನು ತೆಗೆದುಕೊಳ್ಳುವ ಕಾಲ ಬರುತ್ತದೆ. ಆದಕ್ಕೆ ಬದ ಲೇಖಕರು ಸದಾ ಸಜ್ಜಾಗಿರಬೇಕು. ಮಾನವ ಸ್ವಾತಂತ್ರ್ಯಕ್ಕೆ ಲೇಖಕನೊಬ್ಬ ಬದ್ಧನಾದಲ್ಲಿ ಸಾಹಿತ್ಯ ಸಮರಕ್ಕೆ ನಾಂದಿ ಹಾಡುವ ಎಲ್ಲಾ ಸಾಧ್ಯತೆಗಳಿಗೂ ತೆರೆದುಕೊಂಡೆ ಇರಬೇಕಾಗುತ್ತದೆ. ಏಕೆಂದರೆ ಬರೆಯುವುದೆಂದರೆ ಸ್ವಾತಂತ್ರ್ಯವನ್ನು ಬಯಸುವ, ಬೇಡುವ, ಒತ್ತಾಯಿಸುವ ಕ್ರಿಯೆಯಾಗಿರುತ್ತದೆ. ಒಮ್ಮೆ ಇದು ಪ್ರಾರಂಭವಾದಲ್ಲಿ ಲೇಖಕ ಬದ್ಧನಾಗಿ ಬಿಡುತ್ತಾನೆ.

ಲೇಖಕನೊಬ್ಬ ಮಧ್ಯವರ್ತಿ. ಅವನ ಬದ್ಧತೆ ಇರುವುದೂ ಈ ಮಧ್ಯವರ್ತಿಯ ಕೆಲಸದಲ್ಲೇ. ಆದ್ದರಿಂದ ಸಾಹಿತ್ಯವೆಂದರೆ ಲೇಖಕ ತನ್ನೊಡನೆ ತಾನೇ ನಡೆಸಿಕೊಳ್ಳುವ ಸಂಭಾಷಣೆಯಲ್ಲ; ಇಡೀ ಮನುಷ್ಯ ಕುಲದೊಡನೆ ನಡೆಸುವ ಸಂವಾದ. ಆದ್ದರಿಂದ ಲೇಖಕ ತನ್ನ ಅಂತರಂಗವನ್ನೇ ನೆಚ್ಚಿಕೊಂಡಿರಲು ಸಾಧ್ಯವಿಲ್ಲ. ತನ್ನ ಸುತ್ತಲ ಪರಿಸರದ ಪ್ರಜ್ಞೆಯನ್ನು ಬೆಳೆಸಿಕೊಳ್ಳಬೇಕಾಗುತ್ತದೆ. ಚಾರಿತ್ರಿಕ ಪ್ರಜ್ಞೆಯನ್ನು ವಿಸ್ತರಿಸಿಕೊಳ್ಳಬೇಕಾಗುತ್ತದೆ. ಎಲ್ಲವನ್ನೂ ಒಂದು ನಿರ್ದಿಷ್ಟ ಮಾನವೀಯ ಚೌಕಟ್ಟಿನಲ್ಲಿ ಕಟ್ಟಿಕೊಡುವ ಕುಶಲತೆಯನ್ನು ರೂಢಿಸಿಕೊಳ್ಳಬೇಕಾಗುತ್ತದೆ. ಅಂದರೆ ತನ್ನ ಕಾಲದ ತನ್ನೆದುರಿನ ಸಂದರ್ಭಗಳಿಗೆ, ತುಡಿತಗಳಿಗೆ, ಆಸೆ–ಆಕಾಂಕ್ಷೆಗಳಿಗೆ ಸ್ಪಂದಿಸುತ್ತಿರುವಾಗಲೇ ಏಕಕಾಲಿಕವಾಗಿ ಅವುಗಳನ್ನು ಒಂದು ಐತಿಹಾಸಿಕ ನೋಟದಲ್ಲಿ ಪರಿಭಾವಿಸಬೇಕಾಗುತ್ತದೆ; ಸಮಗ್ರತೆಯನ್ನು ಕಲ್ಪಿಸಿಕೊಡಬೇಕಾಗುತ್ತದೆ. ಅಂದರೆ ಒಬ್ಬ ಲೇಖಕನ ಕೃತಿ ಕೇವಲ ಮನುಷ್ಯನಾಗಿ ಅವನ ಸ್ಥಿತಿಯ ಆಧಾರದ ಮೇಲೆ ನಿಂತಿರುವುದಿಲ್ಲ; ಒಬ್ಬ ಲೇಖಕನಾಗಿಯೂ ಅವನಿಗೆ ಸ್ವತಂತ್ರ ಅಸ್ತಿತ್ವ ಇರುತ್ತದೆ. ಅವನೊಬ್ಬ ಯೆಹೂದಿಯಾಗಿರಬಹುದು ಇಲ್ಲವೇ ಜೆಕ್ ಆಗಿರಬಹುದು. ಆದರೆ ಅವನೊಬ್ಬ ಯೆಹೂದಿ 'ಬರಹಗಾರ', ಜೆಕ್ 'ಬರಹಗಾರ'ನೂ ಆಗಿರುತ್ತಾನೆ ಎಂಬುದನ್ನು ಮನೆಯುವಂತಿಲ್ಲ, ಯೆಹೂದಿಯೊಬ್ಬನ

ಸ್ಥಿತಿ'ಯನ್ನು ಈ ರೀತಿ ನಿರೂಪಿಸಬಹುದು : ಇತರ ಮನುಷ್ಯರು ಅವನನ್ನು ಯೆಹೂದಿ ಎಂದು ಗುರುತಿಸುತ್ತಾರೆ. ಹೀಗೆ ಇತರರಿಂದ ಗುರುತಿಸಲ್ಪಟ್ಟ ಸ್ಥಿತಿಯಿಂದ ಅವನು 'ಆಯ್ಕೆ ಮಾಡಿಕೊಳ್ಳುತ್ತಾನೆ. ಏಕೆಂದರೆ ನಮಗೆ ಕೆಲವು ಗುಣಗಳು ನಮ್ಮ ಬಗೆ ಇತರರು ಕೊಡುವ ತೀರ್ಪುಗಳಿಂದ ಬರುತ್ತವೆ. ಒಬ್ಬ ಲೇಖಕನ ವಿಷಯದಲ್ಲಿ ಇದು ತುಂಬ ಜಟಿಲವೂ, ಸಂಕೀರ್ಣವೂ ಆಗಿ ಬಿಡುತ್ತದೆ. ಏಕೆಂದರೆ ಲೇಖಕನಾಗಿ ಯಾರೂ ಆಯ್ಕೆ ಮಾಡಿಕೊಳ್ಳಲೇ ಬೇಕಾಗಿಲ್ಲ. ಸ್ವಾತಂತ್ರ್ಯದ ಹುಟ್ಟು ಇರುವುದು ಇಲ್ಲೇ. ಮೂಲಭೂತವಾಗಿ, ಬರೆಯಬೇಕು ಎನ್ನುವ ಇಚ್ಛೆಯಿಂದ ನಾನೊಬ್ಬ ಲೇಖಕನಾಗುತ್ತೇನೆ. ಆದರೆ ನಾನು ಲೇಖಕನಾದೊಡನೆ ಇತರರು ನನ್ನನ್ನು ಲೇಖಕನೆಂದು ಗುರುತಿಸಲು ಪ್ರಾರಂಭಿಸಿಬಿಡುತ್ತಾರೆ; ಮತ್ತು ನನಗಿಷ್ಟವಿರಲಿ, ಇಲ್ಲದಿರಲಿ ನನ್ನ ಮೇಲೆ ಒಂದು ಸಾಮಾಜಿಕ ಜವಾಬ್ದಾರಿಯನ್ನು ಹೊರೆಸಿಬಿಡುತ್ತಾರೆ. ನಾನು ಕೆಲ ಸಾಮಾಜಿಕ ಬೇಡಿಕೆಗಳಿಗೆ ಸ್ಪಂದಿಸಲೇ ಬೇಕಾಗುತ್ತದೆ. ಇಂಥ ಸ್ಥಿತಿಯನ್ನು ತಲುಪಿದ ಲೇಖಕ ಏನೇ ಮಾಡಲಿ, ತಾನು ಏನನ್ನು ಪ್ರತಿನಿಧಿಸುತ್ತೇನೆಂದು ಇತರರು ತಿಳಿದುಕೊಂಡಿರುತ್ತಾರೋ ಅದೇ ಚೌಕಟ್ಟಿನಲ್ಲಿ ಮಾಡಬೇಕಾಗುತ್ತದೆ.

ಬದ್ಧ ಸಾಹಿತಿಯೊಬ್ಬ ಸ್ವಾತಂತ್ರ್ಯದ ಬಗ್ಗೆ ಬರೆಯುವಾಗ ಅವನೇನೂ ಅಮೂರ್ತವಾದ, ದೊರೆಯಲಾಗದ ಸ್ವಾತಂತ್ರ್ಯದ ಬಗ್ಗೆ ಬರೆಯುವುದಿಲ್ಲ. ಅಲ್ಲದೆ ಹಾಗೆ ಬರೆಯಲು ಅವನಿಗೆ ಶುದ್ಧವಾದ ಪರಮವಾದ ಸ್ವಾತಂತ್ರ್ಯ ಸಿಕ್ಕೇ ಬಿಟ್ಟಿರುತ್ತದೆ ಎಂದೇನೂ ಅಲ್ಲ. ಶಾಶ್ವತ ಮೌಲ್ಯಗಳ ಬಗ್ಗೆ ಮಾತಾಡುವುದು ಸುಲಭವಲ್ಲ. ಏಕೆಂದರೆ ಸ್ವಾತಂತ್ರ್ಯವೆಂಬುದು ಸಾಗರದಂತೆ, ಅದಕ್ಕೆ ಅಂತ್ಯವೇ ಇಲ್ಲ. ಆದರೆ ಬರವಣಿಗೆಯು ಯಾವತ್ತೂ ಬದಲಾವಣೆಗಾಗಿ, ವಿಮೋಚನೆಗಾಗಿ ಒಂದು ಹೋರಾಟವಾಗಿರುತ್ತದೆ. ಬದಲಾಯಿಸುವ ಯೋಚನೆ, ಯೋಜನೆಗಳಿಲ್ಲದೆ ಲೇಖಕ 'ಸ್ಥಿತಿ'ಯನ್ನು ತೋರಿಸಲಾರು ಮಾನವ ಸ್ಥಿತಿಯ ನಿಷ್ಪಾಕ್ಷಿಕ ಚಿತ್ರವನ್ನು ಕೊಡಲು ಹೋಗುತ್ತೇನೆನ್ನುವುದು ಕನಸಿನ ಮಾತೇ ಸರಿ. ಯಾವ ಒಬ್ಬ ಮನುಷ್ಯನೂ ಇನ್ನೊಬ್ಬನನ್ನು ನಿಷ್ಪಾಕ್ಷಿಕ ದೃಷ್ಟಿಯಿಂದ ನೋಡಲು ಸಾಧ್ಯವೇ ಇಲ್ಲ. ಅದು ದೇವರಿಗೂ ಸಾಧ್ಯವಿಲ್ಲ. ದೇವರು ಎಂಬುವವನು ಇದ್ದಲ್ಲಿ ಅವನೂ ಮನುಷ್ಯನೊಂದಿಗಿನ ಒಂದು ಸಂಬಂಧದ ಸಂದರ್ಭದಲ್ಲಿ ಮಾತ್ರ ಇರಲು ಸಾಧ್ಯ. ಏಕೆಂದರೆ ಪ್ರೇಮದಲ್ಲಿ, ದ್ವೇಷದಲ್ಲಿ, ಸಿಟ್ಟಿನಲ್ಲಿ, ಭಯದಲ್ಲಿ, ಸಂತೋಷದಲ್ಲಿ, ಕರುಣೆಯಲ್ಲಿ, ಅಸೂಯೆಯಲ್ಲಿ, ಮೆಚ್ಚುಗೆಯಲ್ಲಿ ಅನುಮಾನದಲ್ಲಿ, ಭರವಸೆಯಲ್ಲಿ........ಮಾತ್ರ ಮನುಷ್ಯ ಮತ್ತೇ ಪ್ರಪಂಚ ತಮ್ಮ 'ನಿಜಸ್ಥಿತಿ'ಯಲ್ಲಿ ಬಿಚ್ಚಿಕೊಳ್ಳಲು ಸಾಧ್ಯ. ಆದ್ದರಿಂದ ಲೇಖಕನಾದವನು, 'ನನಗೆ ಮೂರು ಸಾವಿರ ಓದುಗರಿದ್ದರೆ ಎಷ್ಟು ಚೆನ್ನ !' ಎಂದು ಕೇಳುವುದಕ್ಕಿಂತ 'ನಾನು ಬರೆದದ್ದನ್ನು ಎಲ್ಲರೂ ಓದಿದರೆ ಏನಾಗಬಹುದು ?' ಎಂದು ನನ್ನನ್ನು ತಾನೇ ಕೇಳಿಕೊಳ್ಳಬೇಕು. ಸಾಹಿತ್ಯದ ಮೂಲಭೂತ

ಗುರಿ ಜನರಿಗೆ ತಮ್ಮ ಸ್ವಾತಂತ್ರ್ಯದ ಬಗ್ಗೆ ಅರಿವನ್ನು ಮೂಡಿಸುವುದು ; ತಮ್ಮ ಕ್ರಿಯೆಗಳಿಗೆ ತಾವೇ ಜವಾಬುದಾರರೆಂಬುದನ್ನು ತಿಳಿಯಪಡಿಸುವುದು ; ಯಾವೊಬ್ಬ ಮನುಷ್ಯನೂ ತನ್ನ ಸುತ್ತಲ ಪ್ರಪಂಚದ ಬಗ್ಗೆ ಮೂಢ ಇಲ್ಲವೇ ಮುಗ್ಧನಾಗಿ ಉಳಿಯದಂತೆ ಮಾಡುವುದು. ಆದ್ದರಿಂದ ಲೇಖಕನಾದವನು ಕೆಲ ವಿಷಯಗಳನ್ನು ಪ್ರಸ್ತಾಪ ಮಾಡದೇ ಇದ್ದಲ್ಲಿ, 'ಆ ವಿಷಯಗಳನ್ನು ಬಿಟ್ಟು ಈ ವಿಷಯಗಳನ್ನು ಮಾತ್ರ ಏಕೆ ಪ್ರಸ್ತಾಪ ಮಾಡಿದ್ದೀ', ಬದಲಾವಣೆಯನ್ನು ಬಯಸುವ ನೀನು 'ಆ' ಬದಲಾವಣೆಯನ್ನು ಬಿಟ್ಟು 'ಈ' ಬದಲಾವಣೆಗೇ ಏಕೆ ಒತ್ತಾಯಿಸುತ್ತಿದ್ದೀ ? ಎಂದು ಪ್ರಶ್ನಿಸಲು ಓದುಗನಿಗೆ ಹಕ್ಕಿದೆ. ಹೀಗೆ ಹೇಳುವಾಗ ಸಾರ್ತ್ರ್ ಲೇಖಕನ ಸ್ವಾತಂತ್ರ್ಯವನ್ನು ಮೊಟಕುಗೊಳಿಸದೆ ಅವನ ಜವಾಬ್ದಾರಿಯನ್ನಷ್ಟೇ ವಿಶೇಷವಾಗಿ ಪ್ರಸ್ತಾಪಿಸುತ್ತಿರುವ ಅಂಶವನ್ನು ನಾವು ಮರೆಯಬಾರದು. ಏಕೆಂದರೆ ಬರವಣಿಗೆಗೆ ಒಂದು 'ಮಾದರಿ' ಇರುತ್ತದೆ. ಕೇವಲ ಕೆಲ ವಿಷಯಗಳನ್ನು ಹೇಳಲು ಆಯ್ಕೆ ಮಾಡಿಕೊಂಡಕ್ಕಷ್ಟೇ ಒಬ್ಬ ಮನುಷ್ಯ ಲೇಖಕನಾಗಿ ಬಿಡುವುದಿಲ್ಲ ; ತಾನು ಹೇಳಬೇಕಾದ್ದನ್ನು ಒಂದು 'ರೀತಿ'ಯಲ್ಲಿ ಹೇಳುವ ಆಯ್ಕೆಯನ್ನು ಮಾಡಿಕೊಂಡದ್ದಕ್ಕಾಗಿ.

(ಆಧಾರ : What is Literature ? )

o—o—o

"ಸತ್ಯಾಗ್ರಹದ ಉದ್ದಕೂ ದುಂಡಾವರ್ತಿ, ಬಲತ್ಕಾರ ಲಾಟಿ ಏಟು, ಅನ್ಯಾಯವಾಗಿ ಸಜ ಮುಂತಾದ ಹಿಂಸಾಕೃತ್ಯಗಳನ್ನು ನಡೆಸಿರುವವರು ಪೋಲೀಸರು ಮತ್ತು ಭೂಮಾಲಕರ ಕಡೆಯವರು. ಸಾಗರದ ಜೈಲಿನಲ್ಲಿ ಕೊಡುತ್ತಿದ್ದ ರೇಷನ್ ತೀರ ಕಡಿಮೆ ಮತ್ತು ಕಳಪೆ ಎಂಬ ಕಾರವಾಕ್ಕೆ ಸತ್ಯಾಗ್ರಹಿಗಳು ಜೈಲಿನ ಮಾಡಿನ ಹಂಚುಗಳನ್ನು ಪುಡಿ ಮಾಡಿದ್ದು, ಮತ್ತು ಕಾಗೋಡಿನಲ್ಲಿ ಗೌಡರಿಗೆ ವಾಚಾಮ ಗೋಚರವಾಗಿ ಬೈದದ್ದು – ಇವನ್ನು ಬಿಟ್ಟರೆ ಸತ್ಯಾಗ್ರಹಿಗಳು ತಮ್ಮ ವರ್ತನೆಯಲ್ಲಿ ಹಿಂಸೆ ಹೋಗಲಿ, ಉದ್ರೇಕವನ್ನು ಕೂಡ ತೋರಿಸಿರಲಿಲ್ಲ. ಹೀಗಿದ್ದರೂ ಈ ಸತ್ಯಾಗ್ರಹಿಗಳನ್ನು ಹಿಂಸಾವಾದಿಗಳು ಎಂದೇ ಚಿತ್ರಿಸಲಾಯಿತು. ಇದು ಕೂಡ ಸ್ವತಂತ್ರ ಭಾರತದ ನೆಹರೂ ರಾಜಕೀಯ ಪರಂಪರೆಗೆ ಅನುಗುಣವಾಗಿಯೇ ಇದೆ."

ಜಿ. ರಾಜಶೇಖರ್
(ಕಾಗೋಡು ಸತ್ಯಾಗ್ರಹ)

# ಸಾಹಿತ್ಯ ಮತ್ತು ಆಲ್ಬರ್ಟೋ ಮೊರಾವಿಯಾ

ಆಲ್ಬರ್ಟೋ ಮೊರಾವಿಯಾ (1907) ಸಮಕಾಲೀನ ಇಟ್ಯಾಲಿಯನ್ ಬಂಡಾಯಲೇಖಕ. ಚರ್ಚ್ ಮತ್ತು ಫ್ಯಾಸಿಸ್ಟ್ ಆಳ್ವಿಕೆಯ ಹಿಂಸೆಯನ್ನು ಧಿಕ್ಕರಿಸಿದಾತ. ಅದಕ್ಕಾಗಿ ಸಾಕಷ್ಟು ನೋವು ಅನುಭವಿಸ ಬೇಕಾಗಿ ಬಂದವನು. ಇಷ್ಟರ ನಡುವೆ ಸಹ ಸಾಹಿತ್ಯದ ಬಗ್ಗೆ ತೀರಾ ಆರೋಗ್ಯ ಕಾರಿ ಮನೋಭಾವ ಹೊಂದಿರುವವನು. ಪ್ರಸ್ತುತ ಲೇಖನ ಮೊರಾವಿಯ ಚೈನಾ ಪ್ರವಾಸ ಕಾಲದಲ್ಲಿ ಚೈನೀ ಲೇಖಕನೊಡನೆ ನಡೆಸಿದ ಮಾತುಕತೆಗಳ ದಾಖಲೆ.

* ಇದನ್ನು ಕನ್ನಡಕ್ಕೆ ಅನುವಾದಿಸಿ ಕೊಟ್ಟವರು ಪುರುಷೋತ್ತಮ. ಇದು 1969ರಲ್ಲಿ ಪ್ರಕಟಿತವಾದ 'ರೆಡ್ ಬುಕ್ ಅಂಡ್ ದಿ ಗ್ರೇಟ್‌ವಾಲ್ ಪುಸ್ತಕದ ಒಂದು ಅಧ್ಯಾಯ.

ಚೀನಾಕ್ಕೆ ಬಂದ ಮೊದಲ ದಿನದಿಂದ ನಾನು ಒಬ್ಬ ಬುದ್ಧಿಜೀವಿಯನ್ನು, ಬರಹ ಗಾರನನ್ನು ಭೇಟಿಮಾಡಿಸಲು ಕೇಳಿದ್ದೆ. ಅದು ಕಷ್ಟದ ಕೆಲಸ ಎಂದು ಹೇಳಲಾಗಿತ್ತು. ಯಾಕೆಂದರೆ ಚೈನೀ ಬರೆಹಗಾರರು ಬಿಡುವೇ ಇಲ್ಲದವರು. ನಂತರ ಒಂದು ಬೆಳಿಗ್ಗೆ ನನ್ನ ಟೆಲಿಫೋನ್ ಕರೆಯಿತು : ಲೇಖಕರೊಬ್ಬರು ನನ್ನ ಭೇಟಿಗಾಗಿ ಕಾದಿದ್ದರು. ನನ್ನ ಹೋಟೆಲಿನ ಮಹಡಿಯ ಒಂದು ಆರಾಮ ಕೋಣೆಯಲ್ಲಿ ರಷಿಯನ್ ಝೂರಿಸ್ಟ್‌ನ ಅಂದರೆ ಹತ್ತೊಂಭತ್ತನೇ ಶತಮಾನದ ಶೈಲಿಯ ಕೋಣೆ; ಲಿನೆನ್‌ನ ಜಾರುವ ಹೊದಿಕೆ ಮತ್ತು ಕಲಾಪತ್ತಿನ ಒರಗು ದಿಂಬುಗಳನ್ನು ಹೊಂದಿರುವ ಹಳೆ ಮಾದರಿಯ ಆರ್ಮ್ ಚೇರುಗಳು, ಕಿಟಕಿಗಳಿಗೆ ಹಳೆ ಮಾದರಿಯ ಜರಿಪರದೆಗಳು; ಬಿಳಿ ಮತ್ತು ನೀಲಿ ಪಿಂಗಾಣಿಯದೊಂದು ಹಳೆ ಮಾದರಿಯ ಚಾ ಪಾತ್ರೆಯ ಜೊತೆಗೆ ಅದಕ್ಕೆ ಹೊಂದು ವಂತಹ ಕಪ್ಪುಗಳು ಮತ್ತು ಕುದಿವ ನೀರಿನದೊಂದು ದೊಡ್ಡ ಜಾಡಿ. ಕಿಟಕಿ ಯಿಂದ ಪೀಕಿಂಗ್‌ನ ಮೋಹಕನೋಟವನ್ನು ಆನಂದಿಸಬಹುದಿತ್ತು. ಎಣಿಸಲಾರದಷ್ಟು ಹಿತ್ತಲುಗಳಲ್ಲಿ ನೆಡಲಾದ ಹಸಿರುಮರಗಳು ಮತ್ತು ಸೂರುಗಳ ಮಣ್ಣಿನ ಹಂಚುಗಳ ಕಂದು ಬಣ್ಣ. ಕ್ಷಿತಿಜದವರೆಗೆ ಹರಡಿದ ಪ್ರಕಾಶಮಾನವಾದ ನೇರಿಳೆ ಬೆರೆತ ನೀಲಿ ಶುಭ್ರ ಆಕಾಶ.

ಇಲ್ಲಿ ಚೈನೀ ಬರಹಗಾರ ಮತ್ತು ನಾನು ಎದರು ಬದರು ಕುಳಿತಿದ್ದೆವು. ನಮ್ಮ ಸುತ್ತ ಮೂವರು ಭಾಷಾಂತರಕಾರರು. ಚುರುಕಾದ ಮತ್ತು ಆಕರ್ಷಕನಾದ ಯುವಕ ನೊಬ್ಬ : ಕಿರಿಕಿರಿಯಾಗುವಂತಹ ಅಧಿಕೃತ ರಿವಾಜಿನ ಮಧ್ಯವಯಸ್ಕನೊಬ್ಬ ; ಮತ್ತು ತೆಳ್ಳಗಿನ, ಸಣ್ಣ ಸಣ್ಣ ವಿಚಾರಗಳಿಂದಲೂ ತಳಮಳಗೊಳ್ಳುವ ; ಮೇಲರಿಮೆಯುಳ್ಳ ಬುದ್ಧಿ ಜೀವಿಯ ತರಹದ ನನ್ನ ಖಾಸಗೀ ದುಭಾಷಿ ; ಬರಹಗಾರ ಯುವಕ. ತುಂಬು ದೇಹವುಳ್ಳವನು. ಸ್ವಲ್ಪ ರೈತನ ಹಾಗೆ ನಡವಳಿಕೆ. ಸರಳವಾದ ದೊಡ್ಡ ಮುಖ ಮತ್ತು ಹರ್ಷದ ಮುಖಭಾವದ ವ್ಯಕ್ತಿ. ಆತ ಆಗಾಗ ನಗುತ್ತಿದ್ದ, ಆದರೆ ವಿಚಿತ್ರವಾಗಿಯೇ, ಆಗ ಅವನ ಹರ್ಷದ ಅಭಿವ್ಯಕ್ತಿ ಮಾಯವಾಗುತ್ತಿತ್ತು. ಅದು ಶಾಲಾಮಾಸ್ತರನೊಬ್ಬನ ನಸುನಗು ; ಒಬ್ಬ ಶಿಕ್ಷಕ, ವಿದ್ಯಾವಂತ ವ್ಯಕ್ತಿಯೊಬ್ಬ ದಾರಿ ತಪ್ಪಿದ ಶಿಷ್ಯ ಅಥವಾ ದಪ್ಪ ತಲೆಯ ವಿದ್ಯಾರ್ಥಿಯ ಎದುರಿಗೆ ನಿಂತಹಾಗೆ. ಆತನ ಬಗ್ಗೆ ಪ್ರಶ್ನೆ ಕೇಳುತ್ತ ಆರಂಭಿಸಿದೆ ಆತನಿಗೆ ಮೂವತ್ತೆಂಟು ವರ್ಷಗಳಾಗಿತ್ತು. ಆತ ಕಾರ್ಮಿಕರ ಮಗ, ಹುಟ್ಟಿದು ಶಾಂಘೈನಲ್ಲಿ. ಆತ ಅದುವರೆಗೆ ಆರು ಕಾದಂಬರಿಗಳನ್ನು ರಚಿಸಿದ್ದ ಮತ್ತು ಎರಡು ನಾಟಕಗಳನ್ನೂ ಸಹ ಬರೆದಿದ್ದ. ಆತನ ಕಾದಂಬರಿಗಳು ಎಷ್ಟು ಪ್ರತಿಗಳು ಮಾರಾಟ ವಾಗುತ್ತಿದ್ದವು ಎಂದು ಕೇಳಿದೆ. ಆತ ಸೂರು ನೋಡುತ್ತ ಉತ್ತರಿಸಿದ—"1963ರಲ್ಲಿ ಒಂದು ಪುಸ್ತಕದ ನಾಲ್ಕು ಲಕ್ಷ ಪ್ರತಿಗಳು ಮಾರಲಾದವು. ಕಡೆಯ ಕಾದಂಬರಿಯ ಒಂದು ಮಿಲಿಯನ್ ಪ್ರತಿಗಳು ಮಾರಾಟವಾಗಿವೆ."

"ನಿಮಗೆ ರಾಯಲ್ಟಿಯ ಮೂಲಕ ತುಂಬಾ ಹಣ ದೊರಕಿರಬೇಕು." ಎಂದು ಹೇಳಿದೆ. "ನಾನು ಬಹಳ ಗಳಿಸುತ್ತಿದ್ದೆ. ಆದರೆ ಸಾಂಸ್ಕೃತಿಕ ಕ್ರಾಂತಿಯ ತರುವಾಯ ನಾವು ಲೇಖಕರೆಲ್ಲ ಸಂಭಾವನೆಗಳನ್ನು ತ್ಯಜಿಸಿದ್ದೇವೆ. ಸರಕಾರ ನಮಗೆ ಸಂಬಳ ಕೊಡು ತ್ತದೆ." ಎಂದು ಆತ ಹೇಳಿದ. ಆತನ ಒಂದು ಮಿಲಿಯನ್ ಪ್ರತಿಗಳು ಖರ್ಚಾದ ಕಾದಂಬರಿ ಬರೆಯಲು ಎಷ್ಟು ಕಾಲ ತಗುಲಿತು ಎಂಬುದನ್ನು ವಿಚಾರಿಸಿದೆ. "ನಾನು ಪಶ್ಚಿಮ ಪ್ರದೇಶದ ಸೈನಿಕರೊಡನೆ ಆರು ತಿಂಗಳನ್ನು ಕಳೆದ ಬಳಿಕ ಎರಡು ತಿಂಗಳಲ್ಲಿ ಬರೆದು ಮುಗಿಸಿದೆ" ಎಂದು ಹೇಳಿದ. ಅದು ಸೈನಿಕರ ಬಗ್ಗೆ ಬರೆಯಲಾದ ಕಾದಂಬರಿ ಯೆಂದು, ಆತ ಸೈನಿಕರ ಬದುಕಿನ ಅನುಭವಗಳನ್ನು ಹಂಚಿಕೊಳ್ಳಲು ಮತ್ತು ಕಾದಂಬರಿಗೆ ವಸ್ತು ಸಂಗ್ರಹಿಸಲು ಅಲ್ಲಿದ್ದನೆಂದೂ ಹೇಳಿದ. ಸ್ವಲ್ಪ ಜೋರಾಗಿಯೇ ನಾನು ಹೇಳಿದೆ: 'ಆದರೆ ಒಳ್ಳೆಯ ಸಾಹಿತ್ಯವನ್ನು ಯೋಜನೆಯ ಮೂಲಕ ರಚಿಸಲಾಗು ವುದಿಲ್ಲ. ಅದು ಸಿಂಪಿಗನ ಕೆಲಸದಂತಲ್ಲ. ಸಾಹಿತ್ಯ ಮುಕ್ತವಾಗಿ ಸ್ವಾತಃಸ್ಫೂರ್ತಿಕವಾಗಿ, ಯಾವುದೇ ಉದ್ದೇಶ ಪೂರ್ವಸಿದ್ಧತೆಯಿಲ್ಲದೆ ರಚಿಸಲ್ಪಡಬೇಕು.' ಬರಹಗಾರ ಮಾವೋನ ಹೇಳಿಕೆಗಳ ಪುಟ್ಟ ಕೆಂಪು ಪುಸ್ತಕವೊಂದನ್ನು ಹಿಡಿದುಕೊಂಡಿದ್ದ, ವಾಸ್ತವವಾಗಿ ನಾನು ಮತ್ತು ನಮ್ಮ ದುಭಾಷಿಗಳು ಸಹ ಹಾಗೆಯೇ ಈ ಪುಸ್ತಕವನ್ನು ಇಟ್ಟುಕೊಂಡಿದ್ದೆವು.

ಆ ಪುಸ್ತಕವನ್ನು ತೆರೆದ ನಮಗೆ ಪುಟಸಂಖ್ಯೆಯನ್ನು ಹೇಳಿದ. ನಾವು ಆ ಪುಟವನ್ನು ತಕ್ಷಣ ತಿರುಗಿಸಿದೆವು. ನಂತರ ಆತ ಗಟ್ಟಿಯಾಗಿ ಪಠಿಸಿದ : "ಎಲ್ಲ ನಿಜವಾದ ಜ್ಞಾನವೂ ನೇರ ಅನುಭವದಿಂದಲೇ ಹುಟ್ಟುತ್ತದೆ. ನಾನು ಇದೇ ಮಾದರಿಯಲ್ಲಿ ಮಾವೋ ಸಹಾಯದಿಂದಲೇ ಉತ್ತರಿಸಬೇಕೆಂಬುದನ್ನು ಕಂಡುಕೊಂಡೆ. ಒಂದು ಕ್ಷಣ ಸಹ ತಡೆಯದೆ ನಾನು ಸಹ ಪುಸ್ತಕವನ್ನು ತೆರೆದೆ. ಪುಟ ಸಂಖ್ಯೆಯನ್ನು ಉಚ್ಚರಿಸಿದೆ. ಅವರು ಆ ಪುಟಕ್ಕೆ ಬಂದೊಡನೆ, ದೊಡ್ಡ ಉಪದೇಶಕಾರನ ದನಿಯಲ್ಲಿ ಓದಿದೆ : ಒಂದು ವಸ್ತುವಿನ ಬೆಳವಣಿಗೆಯ ಮೂಲಭೂತ ಕಾರಣ ಹೊರಗಿನದಲ್ಲ ; ಒಳಗಿನದು. ಅದು ಆ ವಸ್ತುವಿನ ಒಳಗಿನ ಸಂಘರ್ಷದಲ್ಲಿ ಅಡಗಿದೆ." ಬರೆಹಗಾರನಿಗೆ ಇದರಿಂದ ಸಂತಸವೇನೂ ಆಗಲಿಲ್ಲ. ಆತ ನಗುತ್ತಿದ್ದ, ಆತನ ಕಣ್ಣುಗಳು ತುಂಟತನದಿಂದ ಮಿನುಗಿದವು. ಆತ ಪುಸ್ತಕವನ್ನು ಮತ್ತೆ ಬಿಡಿಸಿ ಪುಟ ಹೇಳಿ ಓದಿದ : "ಅಮೂರ್ತವಾದ ಮತ್ತು ಖಡಾಖಂಡಿತವಾಗಿ ಬದಲಾಯಿಸಲಾಗದ ರಾಜಕೀಯ ಪ್ರಮಾಣದ ಇರುವಿಕೆಯನ್ನು ನಾವು ನಿರಾಕರಿಸುವಂತೆಯೇ ಅಮೂರ್ತವಾದ ಮತ್ತು ಖಡಾಖಂಡಿತವಾಗಿ ಬದಲಾಯಿಸಲಾಗದ ಕಲಾ ಪ್ರಮಾಣವನ್ನೂ ನಾವು ಒಪ್ಪಲಾರೆವು ; ಸಮಾಜದ ಎಲ್ಲ ವರ್ಗಗಳಲ್ಲೂ ಪ್ರತಿಯೊಂದು ವರ್ಗವೂ ತನ್ನದೇ ರಾಜಕೀಯ ಮತ್ತು ಕಲಾಪ್ರಮಾಣವನ್ನೂ ಹೊಂದಿರುತ್ತವೆ. ಆದರೆ ಎಲ್ಲ ಸಮಾಜದಲ್ಲೂ ಪ್ರತಿಯೊಂದು ವರ್ಗವೂ ನಿಶ್ಚಯವಾಗಿಯೂ ರಾಜಕೀಯ ಪ್ರಮಾಣವನ್ನು ಮೊದಲನೆಯದಾಗಿ ಮತ್ತು ಕಲಾತ್ಮಕತೆಯ ಪ್ರಮಾಣವನ್ನು ನಂತರದ್ದಾಗಿಯೂ ಪರಿಗಣಿಸುತ್ತದೆ."

ಇದು ನನ್ನನ್ನು ಕೆಣಕಿತು. ನಾನು ಪುಸ್ತಕದ ಹಾಳೆಗಳನ್ನು ತಿರುಗಿಸಿ ಪುಟಸಂಖ್ಯೆಯನ್ನು ನೀಡಿ ಓದಿದೆ : "ಯಾವ ಕಲಾ ಕ್ರಿಯೆಯು ಕಲಾತ್ಮಕತೆಯನ್ನು ಹೊಂದಿರದೋ ಅದಕ್ಕೆ ಶಕ್ತಿ ಇರದು. ಅದು ರಾಜಕೀಯವಾಗಿ ಎಷ್ಟು ಪ್ರಗತಿ ಪರವಾದದ್ದಾದರೂ ಸಹ." ಅಸ್ಪಷ್ಟ ನಗೆಯೊಡನೆ ಬರಹಗಾರ ಮಾವೋ ಪುಸ್ತಕದೊಡನೆ ಪರ್ಯಾಲೋಚಿಸಿ ಉದ್ಗರಿಸಿದ : "ನಮ್ಮ ಎಲ್ಲ ಸಾಹಿತ್ಯ ಮತ್ತು ಕಲೆಯೂ ಜನತೆಯ ಸಮೂಹಕ್ಕಾಗಿ ಮತ್ತು ಮುಖ್ಯವಾಗಿ ಕಾರ್ಮಿಕ ರೈತ ಮತ್ತು ಸೈನಿಕರಿಗಾಗಿ." ಪುಸ್ತಕದಲ್ಲಿ ಅವಸರದಿಂದ ಹುಡುಕಿ ಹೀಗೆ ಮಾರುತ್ತರ ನೀಡಿದೆ : "ಕಲೆಯ ಒಂದು ಶೈಲಿಯನ್ನೊ ಅಥವಾ ಒಂದು ಯೋಚನಾಕ್ರಮವನ್ನೋ ಹೇರಿ ಇನ್ನೊಂದನ್ನು ನಿಷೇಧಿಸಲು ಆಡಳಿತದ ಕ್ರಮವು ಬಳಸುವುದು ಕಲೆಯ ಅಥವಾ ವಿಜ್ಞಾನದ ಬೆಳವಣಿಗೆಗೆ ಅಪಾಯಕರ ಎಂದು ಭಾವಿಸುತ್ತೇವೆ." ತಕ್ಷಣ, ನಗುತ್ತಲೇ ಆತ ಕೋಪದಿಂದ ಓದುತ್ತಾ ಎದುರಾಡಿದ :- "ಕ್ರಾಂತಿಯ ಸಂಸ್ಕೃತಿ ಸಮುದಾಯದ ಉಪಯೋಗಕ್ಕೊಂದು ಕ್ರಾಂತಿಕಾರಿ ಆಯುಧ. ಅದು ಕ್ರಾಂತಿ ಬರುವ ಮುನ್ನ ವೈಚಾರಿಕವಾಗಿ ನೆಲೆ ಸಿದ್ಧಪಡಿಸುತ್ತದೆ ಮತ್ತು ಬಹು ಮುಖ್ಯವಾದುದು, ಖಂಡಿತವಾಗಿಯೂ ಅಗತ್ಯವಾದ ಕ್ರಾಂತಿಯ ಸಮಯದಲ್ಲಿ ಸಾಮಾನ್ಯಕ್ರಾಂತಿಕಾರಿ

ಪಡೆಯ ಹೋರಾಟದ ತಂಡ ಅದು." ಸಿಹಿಯಾಗಿ ಮತ್ತು ನಯವಾಗಿ ನಾನು ಪುಸ್ತಕದಿಂದ ಉತ್ತರಿಸಿದೆ: "ಕಲೆ ಮತ್ತು ವಿಜ್ಞಾನಗಳಲ್ಲಿನ ಸರಿ ತಪ್ಪುಗಳ ಪ್ರಶ್ನೆಯನ್ನು ಕಲಾ ಮತ್ತು ವೈಜ್ಞಾನಿಕ ವರ್ತುಲಗಳಲ್ಲಿ ಮುಕ್ತ ಚರ್ಚೆ ಮತ್ತು ಆಯಾ ಕ್ಷೇತ್ರಗಳಲ್ಲಿ ಪ್ರಾಯೋಗಿಕ ಪ್ರವೃತ್ತಿಯ ಮೂಲಕ ಪರಿಹರಿಸಿಕೊಳ್ಳಬೇಕೇ ಹೊರತು ಸಾರಾಸಗಟು ರೂಪದಲ್ಲಿ ಪರಿಹರಿಸಲಾಗದು."

ಬರಹಗಾರನು ನಾನು ಮಾವೋ ಮಾತುಗಳ ಈ ಆಡಂಬರದ ಮಧ್ಯಯುಗೀಯ ವಾಗ್ವಾದದನ್ನು ಕೊನೆಗೊಳಿಸಲು ಯತ್ನಿಸುತ್ತಿದ್ದೇನೆನ್ನುವುದನ್ನು ಅರಿತು ತಕ್ಷಣ ಆತ ಮೌನಿಯಾದ ಮತ್ತು ಗಂಭೀರನಾದ. ಆಗ ಇದ್ದಕ್ಕಿದ್ದಂತೆ ನನಗನಿಸಿತು. ನಾನು ಆತನ ಬಗ್ಗೆ ಚೈನಾದ ಬಗ್ಗೆ ಚೈನೀ ವಸ್ತುಗಳ ಬಗ್ಗೆ ಕುತೂಹಲ ತೋರಿದ್ದರೂ, ಆತ ನನ್ನ ಯೂರೋಪಿನ ಮತ್ತು ಐರೋಪ್ಯ ಸಂಗತಿಗಳ ಬಗ್ಗೆ ಯಾವ ಕುತೂಹಲವನ್ನು ತೋರಲಿಲ್ಲ. ಇದು ಅಗದೀ ಚೀನೀಯತೆ ಎನ್ನುವುದು ನನಗೆ ಅರಿವಾಯಿತು. ಚೈನೀಯರು ತಾವು ಸ್ವಯಂ ಪೂರ್ಣರೆಂದು ಭಾವಿಸುತ್ತಾರೆ. ಬಹುಷಃ ಅವರು ಸ್ವಯಂ ಪೂರ್ಣರೇ. ಚೀನೀಯನೊಬ್ಬ ಪರಕೀಯವಾದ ಯಾವುದರ ಬಗ್ಗೆಯೂ ಕುತೂಹಲ ವ್ಯಕ್ತಪಡಿಸುವದಿಲ್ಲ. ಸುದ್ದಿ ಬಯಸುವುದಿಲ್ಲ. ಪ್ರಶ್ನೆ ಕೇಳುವುದಿಲ್ಲ. ಆಸಕ್ತಿವಹಿಸುವುದಿಲ್ಲ. ಚೈನಾ ತನ್ನದೇ ಸಾಂಸ್ಕೃತಿಕ ವಲಯದಲ್ಲಿ ತನ್ನಂತಾನೆ ಪರಿಭ್ರಮಿಸುವ ನಕ್ಷತ್ರ. ಈ ವಲಯವನ್ನು ಬಿಟ್ಟು ಗಮನವನ್ನು ಯೂರೋಪಿನವರೆಗೂ ಚಾಚುವುದು ಅಂತರ್ಗ್ರಹ ಯಾನ ಕೈಕೊಂಡ ಹಾಗೆ. ಕುಜಗ್ರಹವನ್ನೋ ಬುಧಗ್ರಹವನ್ನೋ ಶೋಧಿಸುವ ಪ್ರಯತ್ನದಂತೆ, ಕಡೆಗೆ ಈ ಮೌನವನ್ನು ನಾನೇ ಮುರಿದೆ. "ಲುಕಾಚನ ಬರಹಗಳ ಬಗ್ಗೆ ನಿಮ್ಮ ವಿಚಾರವೇನು ?" ತಲೆ ಅಲ್ಲಾಡಿಸುತ್ತಾ ಆತ ಉತ್ತರಿಸಿದ, "ನಾನು ಆತನನ್ನು ಮೆಚ್ಚುವುದಿಲ್ಲ. ಆತ ಪರಿಶೀಲನಾವಾದಿ." "ಸಾರ್ತ್ರ್ ಬಗ್ಗೆಯೂ" "ಆತ ನೋಬೆಲ್ ಬಹುಮಾನ ಧಿಕ್ಕರಿಸಿದ. ಹಾಗೆ ಮಾಡಿದ್ದು ಸರಿಕೂಡ. ಆದರೆ ಆತ ಸಹ ಪರಿಶೀಲನಾವಾದಿ,"

"ನಾವು ಸಾಹಿತ್ಯದ ಬಗ್ಗೆ ಮಾತಾಡೋಣ. ಟಾಲ್‌ಸ್ಟಾಯ್ ಕುರಿತು ನಿಮ್ಮ ಅಭಿಪ್ರಾಯವೇನು ?"

"ಅಲ್ಲಿ ಒಳ್ಳೆಯ ಸಂಗತಿಗಳಿವೆ. ಆದರೆ ಆತ ತನ್ನ ಶತಮಾನದ ಮಿತಿಗಳನ್ನು ಹೊಂದಿರುವವ."

"ದಾಸ್ತೋಯೆವ್ಸ್ಕಿ ?"

'ಈಗ ಆತ ಆಲೋಚಿಸುವುದು ನಿಲ್ಲಿಸಿದ. ದ್ವೇಷದ ಒಂದು ಭಾವನೆ ಅವನ ಲ್ಲುಂಟಾಯಿತು, ಅದನ್ನು ಆತ ವ್ಯಕ್ತಪಡಿಸಲು ಆಗಲಿಲ್ಲ. ಕಡೆಗೆ ಹೀಗೆಂದ" ಆತ ತೀರಾ

ಖಿನ್ನ. ಆತ ಖಿನ್ನವಾದವುಗಳಲ್ಲೇ ತೊಡಗಿದವನು. ನಿರಾಶಾವಾದಿ. ನಿರಾಶಾವಾದ ಒಳ್ಳೆಯದಲ್ಲ."

"ಯಾಕೆ ?"

ತನ್ನ ಕೈಯ್ಯಲ್ಲಿದ್ದ ಮಾವೋ ಪುಸ್ತಕದತ್ತ ಆತ ತೆರಳುವಂತೆ ಕಂಡಿತು. ಆದರೆ ಆತ ಎಚ್ಚತ್ತುಕೊಂಡ ಮತ್ತು ಮೌನ ಧರಿಸಿದ. ಉತ್ತರಿಸಲಿಲ್ಲ.

ಕ್ಷಣದ ನಂತರ ನಾನು ಮುಂದುವರೆಸಿದೆ. "ಜೇಮ್ಸ್ ಜಾಯ್ಸ್‌ನನ್ನು ನೀವು ಬಲ್ಲಿರಾ ?" "ಇಲ್ಲ." "ಶೇಕ್ಸ್‌ಪಿಯರನ ಬಗ್ಗೆ ನೀವು ಏನು ಯೋಚಿಸುವಿರಿ ?"

ಆತ ಅವನನ್ನು ಬಲ್ಲ. ಆದರೆ ಅವನಿಂದ ಸಂಭ್ರಮಗೊಳ್ಳುವವನಲ್ಲ. ಶಾಂತನಾಗಿ ಶೇಕ್ಸ್‌ಪಿಯರ್ ಇದೇ ಯುಗದವನೇನೋ ಎನ್ನುವಂತೆ ಉತ್ತರಿಸಿದ: "ಶೇಕ್ಸ್‌ಪಿಯರ್ ಒಬ್ಬ ಬೂರ್ಜ್ವಾ ಬರಹಗಾರ.

"ಹಾಗೆಂದರೆ ?"

"ತೀರಾ ವಸ್ತುನಿಷ್ಟ. ನಾವು ಒಥೆಲೋನ ಒಂದು ಪ್ರದರ್ಶನ ನೀಡಲು ಯತ್ನಿಸಿದ್ದೆವು. ಪಾತ್ರಧಾರಿಗಳು ಕ್ಷೋಭೆಗೆ ತಳಮಳಕ್ಕೆ ಒಳಗಾದರು, ಪ್ರೇಕ್ಷಕರೂ ಸಹ. ಅದು ಕೆಂಪು ಸೇನೆಯ ಪ್ರೇಕ್ಷಕ ವರ್ಗ. ಪ್ರದರ್ಶನದ ಬಳಿಕ ಅವರ ಭಾವನೆಗಳನ್ನು ಕೇಳಿದಾಗ, ಅವರು ಈ ನಾಟಕವನ್ನು ತಯಾರಿಸುವುದನ್ನು ನಿರುತ್ಸಾಹಗೊಳಿಸಿದರು. ತೀರಾ ಕ್ಷೋಭೆ ಮತ್ತು ತಳಮಳ ಉಂಟು ಮಾಡುವಂತಹದ್ದು."

"ಹಾಗಾದರೆ, ಕಲೆ ಶಾಂತಿ ಕಲಕಬಾರದೆ. ತಳಮಳ ಉಂಟುಮಾಡಬಾರದೇ ?"

"ಕಲೆ ಜನತೆಯ ಸೇವೆ ಮಾಡಬೇಕು"

"ನೀವು ಶೋಲೋಖೋವ್‌ನನ್ನು ಇಷ್ಟ ಪಡುತ್ತೀರಾ ?"

"ಇಲ್ಲ ಆತ ದ್ರೋಹಿ ಮತ್ತು ಜೊತೆಯಲ್ಲಿ ಆತ ನೋಬೆಲ್ ಬಹುಮಾನ ಸ್ವೀಕರಿಸಿದ."

"ಪಾಸ್ತರ್ ನಾಕ್ ?"

"ಆತ ಪ್ರತಿಗಾಮಿ."

"ನೀವು ಇಚ್ಚಿಸುವ ಬರೆಹಗಾರ ಯಾರು." ಆತ ಅವರ ಒಂದು ದೊಡ್ಡ ಯಾದಿಯನ್ನೇ ನೀಡಿದ. "ಫಾದೆಯೆವ್, ಗಾರ್ಕಿ, ಫರ್ಮನಾವ್. ಬಾಲ್ಜಾಕ್, ಡಿಕನ್ಸ್, ಮೆರಿಮೀ ಒಂದು ಕ್ಷಣ ತಡೆದು ನನಗೆ ಸುಲಭವಾಗಿ ಗ್ರಹಿಸಲು ಸಾಧ್ಯವಾಗದಿದ್ದ ಹೆಸರೊಂದನ್ನೂ ಹೇಳಿದ. ಕಡೆಗೆ ನಾನು ಅದನ್ನು ತಿಳಿದುಕೊಂಡೆ. ಹೈನ್. ನನಗೆ

ಮಾರ್ಕ್ಸ್‌ವಾದಿ ಪ್ರತಿಧ್ವನಿ ಸಿಕ್ಕಿತು : ಮಾರ್ಕ್ಸ್ ಹೈನ್‌ನನ್ನು ಓದಿದ್ದ. ಉದಾಹರಿಸಿ ಹೊಗಳುತ್ತಿದ್ದ. ಬರೆಹಗಾರ ಅವಸರವಾಗಿ ಸೇರಿಸಿದ: "ಸಹಜವಾಗಿಯೇ ಈ ಲೇಖಕರನ್ನು ಇಡಿಯಾಗಿ ಅವರು ಇರುವ ಹಾಗೆಯೇ ಸ್ವೀಕರಿಸಬಾರದು. ಅವಶ್ಯಕ ವಾದರೆ, ಅಲ್ಲಲ್ಲಿ ಕತ್ತರಿಯಾಡಿಸಿ ವಿವರಣೆಗಳಿರುವಂತಹ ವಿಮರ್ಶಾತ್ಮಕ ಸಂಪಾದನೆ ಗಳನ್ನು ತಯಾರಿಸಬೇಕು."

ನಾನು ಆತನನ್ನು ಪ್ರಶ್ನಿಸುವುದನ್ನು ಮುಂದುವರೆಸಿದೆ. "ಚೈನೀ ಶಾಲೆಗಳಲ್ಲಿ ಮತ್ತು ವಿಶ್ವವಿದ್ಯಾಲಯಗಳಲ್ಲಿ ತತ್ತ್ವಶಾಸ್ತ್ರ—ಪ್ಲಾಟೋ, ಅರಿಸ್ಟಾಟಲ್, ಸ್ಪಿನೋಜಾ, ಡಿಕಾರ್ಟೆ, ಕಾಂಟ್—ಕಲಿಸುವರೇ ?"

ತತ್ತ್ವಶಾಸ್ತ್ರ ಕಲಿಸುವುದಿಲ್ಲ. ಆದರೆ ಸಾಮಾಜಿಕ ಬೆಳವಣಿಗೆಯ ಇತಿಹಾಸ ಕಲಿಸುವರು"

"ಗ್ರೀಕ್, ಲ್ಯಾಟಿನ್‌ಗಳನ್ನು ?"

"ತೀರಾ ಸ್ವಲ್ಪ. ಅವು ಅಪಾಯಕಾರಿ ಸಾಹಿತ್ಯಗಳು. ಯಾಕೆಂದರೆ ಅವು ಭ್ರಷ್ಟಗೊಳಿಸುತ್ತವೆ."

ಈ ಹಂತದಲ್ಲಿ ಇದುವರೆಗಿನ ಮಾತನ್ನು ಸಂಗ್ರಹಿಸುವಂತೆ ಕೇಳಿದೆ : "ವಾಸ್ತವ ವಾಗಿ, ಸಮಾಜವಾದಿ ವಾಸ್ತವತೆಯ ಸೋವಿಯತ್ ತತ್ತ್ವ ನಿಮಗೆ ಸಮರ್ಪಕವಾದ ದ್ದಾಗಿ ಕಾಣುತ್ತದೆ ?"

"ಹೌದು." ಆತ ಒಂದು ಕ್ಷಣ ಸುಮ್ಮನಿದ್ದ. ಬಳಿಕ ಮುಗಿಸುತ್ತಾ "ನಾವು ಶಾಸ್ತ್ರೀಯ ಚೈನೀ ಸಾಹಿತ್ಯದ ವಿರೋಧಿಗಳಲ್ಲ. ಒಳ್ಳೆಯದನ್ನು ಸ್ವೀಕರಿಸಿ ಕೆಟ್ಟದ್ದನ್ನು ಬಿಡಬೇಕೆಂದು ನಾವು ಯೋಚಿಸುತ್ತೇವೆ. ಒಂದು ರೀತಿಯಲ್ಲಿ ಹೇಳೋದಾದರೆ ಸಾಹಿತ್ಯದಲ್ಲಿ ಬಣ್ಣ ಇದೆ ತಿರುಳೂ ಇದೆ. ಬಣ್ಣವನ್ನು ನಿವಾರಿಸಿಕೊಂಡು ತಿರುಳನು ಉಳಿಸಿಕೊಳ್ಳಬೇಕು. ಮಾವೋ ಕೂಡ ಹೀಗೆಯೇ ಹೇಳುತ್ತಾರೆ," ಎಂದನು.

ಭೇಟಿ ಮುಗಿದಿತ್ತು. ನಾವು ಬೇರೆ ಕಲೆಗಳನ್ನು ಚರ್ಚಿಸಲು ಮರುದಿನ ಮತೆ ಕಾಣಲಿದ್ದೆವು ಆದರೆ ಸಾಹಿತ್ಯ ಪಾಶ್ಚಾತ್ಯ ಸಂಸ್ಕೃತಿ ಮತ್ತು ಚೈನೀ ಸಂಸ್ಕೃತಿಗಳ ನಡುವಿನ ಭೇದವನ್ನು ಸ್ಪಷ್ಟವಾಗಿ ತೋರಿಸಿದ್ದ ಕಲೆಯಾಗಿತ್ತು. ಇಲ್ಲಿ ನಾನು ಕೆಲ ಟೀಕೆಗಳನ್ನು ಸೇರಿಸಲು ಇಚ್ಚಿಸುವೆ. ಮೊದಲನೆದಾಗಿ, ಚೈನಾ ಯೂರೋಪಿನೊಡನೆ ಯಾವುದೇ ಸಂಬಂಧವಿಲ್ಲದೆ, ಬೆಳೆದಿದ್ದನ್ನು ಮರೆಯಬಾರದು. ಮಾಯರು ಒಂದು ಅದ್ಭು ಆರಂಭದ ಬಳಿಕ ಕ್ಷೀಣಿಸದೆ ಒಂದು ತಾಳಿಕೆ ಇರುವ ಪೂರ್ಣವಾದ ಸಂಕೀರ್ಣ ನಾಗರಿಕತೆ ಯನ್ನು ಮೂರು ಸಾವಿರ ವರ್ಷಗಳು ವಿಕಸಿಸಿದ್ದರೆಂದುಕೊಳ್ಳಿ ನಿಮ್ಮೆದರು ಚೈನಾ ಇರುತ್ತದೆ. ಎರಡನೆಯದಾಗಿ, ಎಷ್ಟು ಜನ ಐರೋಪ್ಯರು—ಸಾಮಾನ್ಯರಲ್ಲ, ಬರೆಹ

ಗಾರರು—ಪ್ರಾಚೀನ ಮತ್ತು ನವೀನ ಚೈನೀ ಬರೆಹಗಾರರ ಬಗ್ಗೆ ಅರಿತಿದ್ದಾರೆ? ಮತ್ತು ಕೊನೆಯದಾಗಿ ಸಾಹಿತ್ಯವನ್ನು ರಾಜಕೀಯಕರಣಕೊಳ್ಳಪಡಿಸುವುದು ರಷಿಯನ್ನರ ಉಡುಗೊರೆ, ಅದು ಮಾರ್ಕ್ಸ್‌ನ ತತ್ತ್ವವಲ್ಲ. ಸೋವಿಯತ್ ತತ್ತ್ವ. ಮಾರ್ಕ್ಸ್ ಒಬ್ಬ ಒಳ್ಳೆಯ ಜರ್ಮನನಾಗಿದ್ದ ಮತ್ತು ಸಂಸ್ಕೃತಿಯ ಸ್ವಾತಂತ್ರ್ಯವನ್ನು ಗೌರವಿಸುತ್ತಿದ್ದ. ಆತ ಸಾಹಿತ್ಯವು ರಾಜಕೀಯ ಪ್ರಚಾರವನ್ನು ಮಾಡಬೇಕೆಂದು ಎಂದೂ ಹೇಳಿದವನಲ್ಲ. ಸ್ಟಾಲಿನ್‌ಗೆ ಈ ವಿಚಾರ ಹೊಳೆದದ್ದು ಎರಡನೇ ನಿಕೋಲಾಸ್‌ನ ಗುಪ್ತ ಪೋಲಿಸರ ವರ್ತನೆಯಿಂದ ನೇರವಾಗಿ. ಸಾಹಿತ್ಯ ವಾಸ್ತವವಾದಿಯಾಗಿ ಮತ್ತು ಸತ್ಯವಾದಿಯಾಗಿ ಇರುವುದರಿಂದ ಅಪಾಯಕಾರಿ ಎಂದು ಅವರು ಮನವರಿಕೆ ಮಾಡಿಕೊಂಡಿದ್ದರು ಮತ್ತು ಬುದ್ಧಿಜೀವಿಗಳನ್ನು ಕಾಡಿದರು. ಈ ಬುದ್ಧಿಜೀವಿಗಳು ಈ ರೀತಿ ಕಾಡುವಿಕೆ ಯಿಂದ ನಿಜವಾಗಿ ಅಪಾಯಕಾರಿಗಳಾದರು ಮತ್ತು ಸಾಹಿತ್ಯವನ್ನು ರಾಜಕೀಯಗೊಳಿಸಿ ದರು. ನಂತರ ಕ್ರಾಂತಿಯೊಡನೆ, ಬುದ್ಧಿಜೀವಿಗಳು ಅಧಿಕಾರಕ್ಕೆ ಬಂದ ಬಳಿಕ ಅವರು ಸಮಾಜವಾದಿ ವಾಸ್ತವತೆಗಾಗಿ ಅಂದರೆ ಕ್ರಾಂತಿಗೆ ಸಹಕಾರಿಯಾಗುವಂತಹ ಸಂಸ್ಕೃತಿಗಾಗಿ ತಗಾದೆ ಮಾಡಿದರು. ಚೈನೀಯರು ಹೇಳುತ್ತಾರೆ: ಚೈನಾ ರಷಿಯಾದ ಪ್ರಭಾವ ಗಳಿಂದ ಬಿಡಿಸಿಕೊಳ್ಳಬೇಕು ಎಂದು. ಆದರೆ ಅದಕ್ಕೆ ಮೊದಲು, ನನ್ನ ಅಭಿಪ್ರಾಯದಲ್ಲಿ ಅದು ಸಮಾಜವಾದಿ ವಾಸ್ತವತೆ–ಪ್ರಚಾರದಕಲೆ-ಯನ್ನು ತೊಡೆದುಕೊಳ್ಳಬೇಕು.

---

"ವಿದ್ಯಾಭ್ಯಾಸದ ಯಾವತ್ತು ತಾಪತ್ರಯ ವಹಿಸಿ ಹೊರಬಿದ್ದು, ಅದೃಷ್ಟ ವಂತರಾದರೆ ಜೀವನೋಪಾಯದ ಒಂದಲ್ಲ ಒಂದು ಚಾಕರಿಯನ್ನು ಗಳಿಸಿ ಬಾಳನ್ನು ಕಳೆಯುತ್ತಿರುವ ಹೆಚ್ಚಿನ ವರ್ಗದ ಜನರು ತಮ್ಮ ಮನೋವಿಲಾಸಗಳಿಗೆ ಎಂತಹ ಅವಕಾಶ ಕೊಡುತ್ತಾರೆ? ತಮಗಿರುವ ವಿರಾಮ ಸಮಯವನ್ನು ಹೇಗೆ ಕಳೆಯುತ್ತಾರೆ? ಅವರ ರಜಾ ದಿನಗಳು ಹೇಗೆ ಸರಿಯುತ್ತವೆ—ಎಂದೆಲ್ಲ ಪರಿಶೀಲಿಸಿದಾಗ ಶಿಕ್ಷಣ ಪಡೆದವರ ಮತ್ತು ಪಡೆಯದವರ ಬದುಕಿನಲ್ಲಿ ಹೆಚ್ಚಿನ ವ್ಯತ್ಯಾಸ ಕಾಣುವುದಿಲ್ಲ."

—ಶಿವರಾಮ ಕಾರಂತ

# ಶಿಕಾರಿ : ಒಂದು ಅನಿಸಿಕೆ

—ಬಿ. ಡಿ. ನಾಗನೋತಿ

ನಮ್ಮ ತಲೆಮಾರಿನ ಮಹತ್ವದ ಕೃತಿಕಾರರಲ್ಲಿ ಒಬ್ಬರಾದ ಯಶವಂತ ಚಿತ್ತಾಲರ ಶಿಕಾರಿಯ ಬಗೆಗೆ ಈಗಾಗಲೆ ಸಾಕಷ್ಟು ಚರ್ಚೆಯಾಗಿದೆ. ಈ ಕಾದಂಬರಿಯನ್ನು ಸಮಗ್ರವಾಗಿ ನೋಡುವುದು ನನ್ನ ಉದ್ದೇಶವಲ್ಲವಾದ್ದರಿಂದ ಮತ್ತು ಕೃತಿಯನ್ನು ಓದುತ್ತಿದ್ದಂತೆ ಲೇಖಕರಿಗೆ ಕೃತಿಯ ಹಂದರದಿಂದ ಹೊರಗುಳಿದು ನಿರ್ಲಿಪ್ತವಾಗಿ ಶಿಕಾರಿ ತನವನ್ನು ಒಂದು ಅನುಭವವಾಗಿ ಶೋಧಿಸುವುದು ಸಾಧ್ಯವಾಗಿಲ್ಲ ಎಂದು ಅನಿಸಿದುದ ರಿಂದ ಆ ಭಾಗಕ್ಕೇ ಹೆಚ್ಚು ಒತ್ತು ಕೊಟ್ಟು ನನ್ನ ಅನಿಸಿಕೆಯನ್ನು ಮಂಡಿಸುವ ಪ್ರಯತ್ನವಿದು :

ಈ ಲೇಖಕ ನಮಗೆ ನಿಜವಾಗುವುದು ಬದುಕಿನ ದಟ್ಟ ಅನುಭವಗಳನ್ನು ಸಾರ್ಥಕ ವಾದ ಭಾಷೆಯಲ್ಲಿ ಹಿಡಿದಿಡುವುದರಿಂದ. ಮೂರು ದಾರಿಗಳು ಮತ್ತು ಅವರ ಕಥಾ ಸಂಕಲನಗಳಲ್ಲಿಯ ಚಿತ್ತಾಲತನದ ಮುದ್ರೆ 'ಶಿಕಾರಿ' ಯಲ್ಲಿಯೂ ಕಾಣುತ್ತದೆ. ಚಿತ್ತಾಲರು ಮುಖ್ಯವಾಗಿ ಮಾನವತಾವಾದಿಗಳು. ಇವರ ಸಾಹಿತ್ಯದ ಹಿಂದಿನ ಕಾಳಜಿ ಮನುಷ್ಯ.

ಮನುಷ್ಯ ಮನುಷ್ಯನ ಯಾತನೆಗೆ ಕಾರಣವಾಗುವ, ಆ ಹಿಂದೆ ಸನ್ನಿವೇಶಗಳು ಹೇಗೆ ಸೃಷ್ಟಿಯಾಗುತ್ತವೆ ಎನ್ನುವ ಶೋಧನೆಯು ಅವರ ಮುಖ್ಯ ಆಶಯ. ಶಿಕಾರಿ ಯಲ್ಲಿಯೂ ಅಂತಹ ಒಂದು ಶೋಧನೆಯೇ ನಡೆದಿದೆ. ಕಥಾನಾಯಕ ನಾಗಪ್ಪ

ಶಿಕಾರಿಗೆ ಟಾರ್ಗೆಟ್ ಆದುದನ್ನು ಹೇಳುವಲ್ಲಿ ಲೇಖಕರ ಒತ್ತು ಬಿದ್ದುದು ಸ್ಪಷ್ಟವಾಗಿ ಕಂಡರೂ ಒಟ್ಟಿನಲ್ಲಿ 'ಶಿಕಾರಿ' ಅನ್ನುವ ಪದ ಅರ್ಥಪೂರ್ಣವಾಗಿದೆ.

ನಾಗಪ್ಪ ಪಡುವ ಯಾತನೆ ನಮ್ಮನ್ನು ತಟ್ಟುತ್ತದೆಯಾದರೂ ಆತನ ಅತಿಯಾದ ಭಾವುಕತೆ ಮತ್ತು ಅದಕ್ಕೆ ಪೂರಕವಾಗಿ ಲೇಖಕರು ಕೊಡುವ ಒತ್ತಿನಿಂದಾಗಿ ನಮಗೆ ನಾಗಪ್ಪ ತನ್ನ ಯಾತನೆಯನ್ನು ದೊಡ್ಡದು ಮಾಡಿಕೊಳ್ಳುತ್ತಿದ್ದಾನೆ ಎನಿಸುತ್ತದೆ. ಆತನ ಯಾತನೆಗೆ, ಆತಂಕಕ್ಕೇ ಮುಖ್ಯ ಕಾರಣ: ಆಕಸ್ಮಿಕ ಅನಿಸುವಂಥ ಸನ್ನಿವೇಶಗಳು ಎದುರಾಗಿ ಅದು ಕೊಡುವ ನೋವಿನ ಅರಿವು. ಈ ಆಕಸ್ಮಿಕಗಳನ್ನು ತರುವಲ್ಲಿ ಚಿತ್ತಾಲರು ಸಸ್ಪೆನ್ಸ್ ರೀತಿಯ ತಂತ್ರವನ್ನು ಬಳಸಿ ಕೊನೆಯವರೆಗೂ ಕುತೂಹಲವನ್ನು ಕಾಯ್ದುಕೊಂಡು ಹೋಗುವಲ್ಲಿ ಯಶಸ್ವಿಯಾಗಿದ್ದಾರೆ. ಪತ್ತೇದಾರಿ ಕಾದಂಬರಿ ತರಹದ ತಂತ್ರ ಶಿಕಾರಿಗೆ ಅನಿವಾರ್ಯವಾಗಿತ್ತೆ ಎಂಬ ಗುಮಾನಿ ಬರುತ್ತಿದ್ದಂತೇ ಅತಾರ್ಕಿಕ ಬದುಕಿನ ನಿಗೂಢ ತಿರುವುಗಳು ಲೇಖಕರನ್ನು ಹೀಗೆ ಬರೆಯಲು ಒತ್ತಾಯಿಸಿರಬೇಕೆ ಎಂದೂ ಮತ್ತೊಮ್ಮೆ ಅನಿಸುತ್ತದೆ.

ನಾಗಪ್ಪನ ನೋವಿನ ಅರಿವು ದೊಡ್ಡದಾಗುತ್ತ ಹೋದಂತೆ ತನ್ನನ್ನು ಶಿಕಾರಿ ಯಾಡುವ ದೊಡ್ಡ ತಂಡವನ್ನೆ ಕಾಣುತ್ತಾನೆ. ನಾಗಪ್ಪನ ತೀವ್ರವಾದ ಯಾತನೆಯನ್ನು ಚಿತ್ರಿಸುವಲ್ಲಿ ಅದಕ್ಕೆ ಕಾರಣಗಳನ್ನು ವಾಸ್ತವದಲ್ಲೇ ಕಂಡುಕೊಳ್ಳುತ್ತಾರೆ. ಮನುಷ್ಯನ ಮೂಲಭೂತ ಪ್ರವೃತ್ತಿ ಶಿಕಾರಿ; ಆದಿಮಾನವನ ಪಳೆಯುಳಿಕೆಯಾಗಿ ಉಳಿದು ಬಂದ ಗುಣ. ಸನ್ನಿವೇಶ ಮತ್ತು ಸ್ವರೂಪ ಬದಲಾಗಿದೆಯಷ್ಟೆ! ಇದಕ್ಕೆ ಕಾರಣವೂ ಇದೆ: "ನಮ್ಮ ಎಲ್ಲ ವ್ಯವಹಾರಗಳ ಅಡಿಗೆ ಸಾಮಾಜಿಕ ನಡವಳಿಕೆಯು ಕೆಳಗೆ ಕೆಲಸ ಮಾಡುವ ಶಕ್ತಿಯೊಂದೇ—ಸ್ವಾರ್ಥ. ತನ್ನೊಬ್ಬನ ಹಿತವನ್ನು ರಕ್ಷಿಸಿಕೊಳ್ಳುವ ಭರದಲ್ಲಿ ಉಳಿದ ವರನ್ನು ಬಲಿಕೊಡಲು ಹಿಂಜರಿಯದ ಸ್ವಾರ್ಥ." ನಾಗಪ್ಪನನ್ನ ಶಿಕಾರಿಯಾಡಲು ಹೊರಟ ತಂಡ ನಮಗೆ ಕಾಣುತ್ತಿದ್ದಂತೆಯೆ, ಈ ತಂಡ ಬೆಳೆಯುತ್ತಿರುವುದನ್ನು ನೋಡುತ್ತಿದ್ದಂತೆಯೇ ಓದುಗನಿಗೆ ಎರಡು ಅನಿಸಿಕೆಗಳುಂಟಾಗುತ್ತವೆ.

ನಾಗಪ್ಪ ತನ್ನ ನಿಷ್ಠುರತೆಯಿಂದ ಮತ್ತು ತನ್ನಲ್ಲಿನ ಲೇಖಕ ಗುಣದಿಂದಾಗಿ ತನ್ನನ್ನು ಬೇಟೆಯಾಡುವ ತಂಡವನ್ನ ಹೆಚ್ಚಿಸುತ್ತಿದ್ದಾನೆ. ಅಲ್ಲದೆ ಶಿಕಾರಿಯಾಡಲು ಅವರು ಹೊಂಚು ಹಾಕಿದ್ದು ನಾಗಪ್ಪನಾಡಬಹುದಾಗಿದ್ದ ಶಿಕಾರಿಯಿಂದ ತಪ್ಪಿಸಿಕೊಳ್ಳಲಿ ಕ್ಕೆಂದೇ. ನಾಗಪ್ಪ ಕಾದಂಬರಿ ಬರೆಯುವ ಮುಖೇನ ಅಥವಾ ಬರೆಯುತ್ತೇನೆ ಎಂದು ಹೆದರಿಸುವ ಮೂಲಕ (ಶ್ರೀನಿವಾಸನನ್ನು ಶಿಕಾರಿಯಾಡಲು ಹೊರಟಿದ್ದಾನೆ ಎಂಬ ಗುಮಾನಿ ಬರುತ್ತದೆ. ಇದಕ್ಕೆ ಮುಖ್ಯ ಕಾರಣ: ನಾಗಪ್ಪನ ಸಾಹಿತ್ಯದ ಹಿಂದಿನ ಕಾಳಜಿ ಎಂತಹದು? ಅದು ಕೇವಲ ಸೃಷ್ಟಿಶೀಲ ಮತ್ತು ಲೇಖಕನ ಸಾಮಾಜಿಕ ಜವಾ-

ಬ್ದಾರಿಯ ಅರಿವಿರುವ ಬರಹಗಾರನದೊ ಅಥವಾ ಇತರರ ಹಾದರವನ್ನು ಬಯಲಿಗೆಳೆಯುವ (ಇದು ಒಮ್ಮೊಮ್ಮೆ ಬ್ಲ್ಯಾಕ್‌ಮೇಲ್ ಕೂಡ ಆಗಬಹುದು.) ಪತ್ರಿಕಾ ಸಾಹಿತ್ಯವೊ ? ಈ ದ್ವಂದ್ವ ಹಾಗೇ ಉಳಿದು ಬಿಡುತ್ತದೆ. ವ್ಯವಸ್ಥೆಯ (ಕ್ರೌರ್ಯವನ್ನ) ಸಾರ್ವತ್ರಿಕವೆನಿಸುವ ನೆಲೆಯೊಂದರಲ್ಲಿ ತರದೆ ನಾಗಪ್ಪ ತಾನು ಕಂಡ, ಉಂಡ ಅನುಭವಗಳನ್ನ ಪಾತ್ರಗಳನ್ನ ಮತ್ತು ಅದಕ್ಕೆ ಕಾರಣವಾದ ವ್ಯಕ್ತಿಗಳನ್ನ ತದ್ವತ್ತಾಗಿ ತಂದು ಬಿಡುತ್ತಾರೆ. ಅಲ್ಲದೆ ಇದನ್ನೆಲ್ಲ ಯಥಾವತ್ತಾಗಿಯೇ ಬಗೆಯುತ್ತೇನೆ ಎಂದು ಅರ್ಜುನರಾವ್‌ಗೆ ಹೇಳುವುದರಲ್ಲಾಗಲಿ ಮತ್ತು ಈ ಹಿಂದೆ ಒಂದು ಕಥೆಯನ್ನು ಶ್ರೀನಿವಾಸನ ತಾಯಿಯ ಮೇಲೆ ಬರೆದಿದ್ದನೆಂಬುದು ನಾಗಪ್ಪನನ್ನು ಒಬ್ಬ Genuine ಲೇಖಕನಾಗಿ ಪರಿಗಣಿಸಬೇಕೆ ಎಂಬ ಪ್ರಶ್ನೆ ಹುಟ್ಟಿಸುವ ಸಂದರ್ಭಗಳು.

"ಥತ್ತೇರಿ, ಈಗ ಹೊಳೆಯುತ್ತಿದೆ, ಇದು ತನ್ನ ಬಗ್ಗೆ ನಾನು ಬರೆಯುತ್ತಿದ್ದ ಕಾದಂಬರಿಯೆಂದು ತಿಳಿದೇ ಹೆದರಿದ್ದಾನೆ....ನನ್ನ ಬರವಣಿಗೆಯ ವಹಿಯನ್ನೂ ನೋಡಲು ಹೆದರಿಕೊಂಡಿದ್ದಾನೆ....ಇನ್ನಷ್ಟು ಹೆದರಿಸಬೇಕು," ಎಂದುಕೊಳ್ಳುತ್ತಾನೆ ನಾಗಪ್ಪ. ಇನ್ನೊಮ್ಮೆ ಶ್ರೀನಿವಾಸ "ನನ್ನ ಬಗ್ಗೆ ಕಾದಂಬರಿ ಬರೆದು, ನಾನು ಕಷ್ಟಪಟ್ಟು ಗಳಿಸಿದ ಅಂತಸ್ತಿಗೆಲ್ಲ ಧಕ್ಕೆ ತರುವಂತೆ ನನ್ನ ಮರ್ಯಾದೆ ಕಳೆಯಬೇಡ ಎಂದು ಕಾಲಿಗೆ ಬಿದ್ದು ಬೇಡುವಾಗ ನಾಗಪ್ಪನ ಪ್ರತಿಕ್ರಿಯೆ ಎಂಥದು ? ಹೋಗಲಿ, ವಿಚಾರಣೆಯ ಕಾಲದಲ್ಲಿ ಮಿ॥ ದಸ್ತೂರನು ಹೇಳುವ ಮಾತುಗಳೂ "ನೀನು ನಿನ್ನದೇ ಆದ ಜಗತ್ತಿನಲ್ಲಿ ನಿಂತು ಪ್ರೇರೇಪಿಸಿದ ಕೃತಿಗಳು ಇನ್ನೊಂದು ಜಗತ್ತಿನಲ್ಲಿಯ ಹಿತಾಸಕ್ತಿಗಳಿಗೆ ಧಕ್ಕೆ ತಂದವು." ಈ ಮೇಲಿನ ಮೂರು ಸಂದರ್ಭಗಳು ನಾಗಪ್ಪನಿಗೆ ಲೇಖನಿಗಿರಬೇಕಾದ ಸಾಂಕೇತಿಕತೆಯ ಅರಿವಿಲ್ಲದುದನ್ನೂ ಮತ್ತು ನಾಗಪ್ಪನೂ ಶಿಕಾರಿಯಾಡುವ ಮನೋಭಾವದವನೇ ಎಂಬುದನ್ನೂ ಸೂಚಿಸುವುದಿಲ್ಲವೆ ? ನಾಗಪ್ಪನಿಗೂ ಈ ಅರಿವು ಇಲ್ಲವೆಂದಲ್ಲ: "ಫಿರೋಜ, ಶ್ರೀನಿವಾಸರ ಭಯದ ಸ್ವರೂಪ ಕೂಡ ಇಂತಹುದೇ ಆಗಿರಬೇಕು ಇದಕ್ಕೆ ನಾನು ಮೂಲವಾಗಿರಬೇಕು. ಅಂತೆಯೇ ಈ ನಿರ್ಮೂಲನದ ಸಂಚು."

ಶ್ರೀನಿವಾಸ, ಅರ್ಜುನರಾವ್, ನಾಯಕ ಫಿರೋಜ ಇವರ ಭಯಕ್ಕೆ ನಾಗಪ್ಪ ಕಾರಣನಾಗಿದ್ದಾನೆ. ಅವರ ಭಯವನ್ನು ಇನ್ನಷ್ಟು ಗಟ್ಟಿಯಾಗಿಸುವಂತೆ ನಾಗಪ್ಪನ ನಿಷ್ಠುರ ಮಾತುಗಳು. ಇದರಿಂದ ನಾಗಪ್ಪನನ್ನ ಶಿಕಾರಿಯಾಡುವ ತಂಡ ಬೆಳೆಯುತ್ತದೆ. ಶಿಕಾರಿಯ ಕೊನೆಯ ಟಾರ್‌ಗೆಟ್ ನಾಗಪ್ಪನೇ ಆಗಿಬಿಡುತ್ತಾನೆ. ಇಲ್ಲಿಯೆ ಲೇಖಕರ ಒತ್ತು ಬೀಳುವುದು. ನಾಗಪ್ಪ ಅಸ್ವಸ್ಥ ಮನಸ್ಸಿನ, ಮೆತ್ತನೆಯ ಮನುಷ್ಯ. ಶ್ರೀನಿವಾಸ, ಫಿರೋಜನಂಥವರು ತಮ್ಮನ್ನು ಶಿಕಾರಿಯಾಡಲು ಬಂದವರನ್ನ – ಒಂದು ಕ್ಷಣಕ್ಕೂ ಆಸ್ಪದ ಕೊಡದೆ ಹೆಚ್ಚು ಚಾಲೂಕಿನಿಂದ ತಪ್ಪಿಸಿಕೊಂಡು - ಮೃಗಗಳನ್ನಾಗಿಸಿ

ಬೇಟೆಯಾಡುವ ಬೇಡರು. ಇದರಿಂದಾಗಿಯೇ ಅವರು ಓದುಗರ ಅನುಕಂಪವನ್ನು ಪಡೆಯಲಾರರು. ನಾಗಪ್ಪನಂತಹ ಸರಳ ಸ್ವಭಾವದ, ಮೆತ್ತಗಿನ ಜನರೇ ಶಿಕಾರಿಗೆ ತುತ್ತಾಗುವುದರಿಂದ ನಾಗಪ್ಪನ ನೋವು ನಮ್ಮನ್ನು ತಟ್ಟುತ್ತದೆ. "ಪ್ರತಿಭೆಯಿದ್ದರಷ್ಟೆ ಸಾಲದು, ಅದನ್ನು ತನಗೇ ಅನ್ಯಾಯವಾಗದಂತೆ ಪ್ರಕಟಿಸುವ ಚಾತುರ್ಯವೂ ಬೇಕು, ದಕ್ಷತೆಯೂ ಬೇಕು." ಇದು ನಾಗಪ್ಪನಿಗೆ ಕೊನೆಯಲ್ಲಿ ಅರಿವಾಗುವ ಮಾತು. ಈ ಅರಿವೇ ಇನ್ನಷ್ಟು ನೋವಿನದು. ಹೀಗಿದ್ದಾಗ್ಯೂ ನಾಗಪ್ಪನ ಯಾತನೆ ತೀರಾ ಒಳಗಿನಿಂದ ಬಂದುದೆ ಅಂದರೆ ಹಾಗೂ ಅನಿಸುವುದಿಲ್ಲ. ಆತ ಈ ಜಗತ್ತಿನ ಶಿಕಾರಿ ಪ್ರವೃತ್ತಿಗೆ ಬೌದ್ಧಿಕ ಸ್ತರದಲ್ಲಿ ಪ್ರತಿಕ್ರಿಯಿಸುತ್ತಿದ್ದಾನೆ ಎಂದು ತೋರುತ್ತದೆ. ನೌಕರಿ ಕಳೆದುಕೊಳ್ಳುವ, ಕಳೆದುಕೊಂಡು ನಿರ್ಗತಿಕನಾಗುವ ಭಯ ಅವನಿಗಿದ್ದಂತಿಲ್ಲ. ನಾಗಪ್ಪ ಆರ್ಥಿಕವಾಗಿ ಸುಭದ್ರನೇ, ನೌಕರಿ ಕಳೆದುಕೊಂಡರೂ ಹೊಟ್ಟೆಯ ಪ್ರಶ್ನೆ ಅವನಿಗಿಲ್ಲ. ಅಥವಾ ಆ ಬಗ್ಗೆ ಕಾದಂಬರಿಯಲ್ಲೆಲ್ಲೂ ಸುಳಿವೇ ಇಲ್ಲ. ಆತನಿಗೆ ತೀವ್ರವಾಗಿ ಅನಿಸುವುದೊಂದೆ : ತನ್ನನ್ನು ಶಿಕಾರಿಯಾಡಲು ದೊಡ್ಡ ತಂಡವೇ ಬೆನ್ನಟ್ಟಿದೆ : ಅದರ ಮೂಲವೇನು ಎಂಬ ತಾತ್ವಿಕ ತಡಕಾಟವೇ ಅವನ ಮುಖ್ಯ Concern ಆಗಿದೆ. ಇದರಿಂದಾಗಿ ಈ ದೇಶವನ್ನು ಕಾಡುತ್ತಿರುವ ನಿರುದ್ಯೋಗ ಸಮಸ್ಯೆಯ ಆಯಾಮ ಈ ಕಾದಂಬರಿಗೆ ದಕ್ಕದೇ ಹೋಗಿದೆ.



"ಪ್ರಾಥಮಿಕ ಶಾಲೆಯ ಮೊದಲನೆಯ ತರಗತಿಯಲ್ಲಿಯೇ ದೇಶಭಕ್ತಿಯನ್ನು ಕಲಿಸುವವರು ನಾವು. ಇನ್ನೂ ಅಂಥ ಉದ್ದಾಮ ಆಸೆಗಳನ್ನು, ಘೋಷಣೆಗಳಲ್ಲಿ ಸಾರುವವರು ನಾವು. ದೇಶದ ಜನಗಳ ಚರಿತ್ರೆಯನ್ನು ಹೇಳುವಾಗ—ತಿಳಿದ ಸತ್ಯವನ್ನು ಸಹ ಮರೆಯಿಸಿ, ನಮ್ಮ ಪೂರ್ವಜರ ಅಪರಾಧಗಳನ್ನು ಅಡಗಿಸಿಟ್ಟು, ಉಜ್ವಲ ಅಂಶಗಳನ್ನಷ್ಟೇ ಅತೀಕರಿಸಿ ಹೇಳುವವರು ನಾವು, ಆಗ ಚರಿತ್ರೆ ಎಂಬ ಶಾಸ್ತ್ರ ನಮಗೆ ಏನು ಪಾಠ ಕಲಿಸಬಲ್ಲುದು ? ಚರಿತ್ರೆಯೆಂಬುದು ಒಂದು ದೇಶದ ಮಾನವ ಕುಲದ ಸೋಲು ಗೆಲುವುಗಳ ಕತೆ. ರಾಜರುಗಳ ಸೋಲು ಗೆಲುವುಗಳ ಪಟ್ಟಿಯಲ್ಲ."

—ಶಿವರಾಮ ಕಾರಂತ

# ಎರಡು ಕಿರುಗತೆಗಳು

—ವೇಣುಗೋಪಾಲಸೊರಬ

## ೧. ರಥಾವರೋಹಣದ ಕಥೆ

ರಥದ ಮೇಲೆ ಹತ್ತಿದ ಕೂಡಲೇ, ಹಣ್ಣು ಜವನ ಎಸೆಯುವುದು ಒಂದು ಕ್ರಮ. ಕೆಲವರು ದೇವರೋ, ಪುರೋಹಿತರೋ – ಮೇಲಿದ್ದವರ ಮುಖಕ್ಕೇ ಗುರಿಯಿಟ್ಟು ಹೊಡೆಯುತ್ತಾರೆ. ಅದು ಅವರವರ (ಮೇಲಿದ್ದವರ) ಕರ್ಮ ಎನ್ನಬೇಕು.

"ಕರ್ಮ ಹೆಂಗಾದಾತು. ಪುಣ್ಯ ಅಂದ್ರೆ ಏನು ನಾಲ್ಗ್ಯಾಗೆ ಉಳಬಿದ್ದು ಓದೀತಾ ?"

ಗಂಗಣ್ಣ ದೃಷ್ಟಿ ಹೊರಳಿಸಿ, ನೋಡಿದ – ಪುಟ್ಟಯ್ಯನವರು.

"ಏನು ಬುದ್ದಿ, ಪುಟ್ಟಯ್ಯನವರು – ಯಾವಾಗಲೂ ರತದ ಮ್ಯಾಕಿರೋವರು, ಇವತ್ಯಾಕಿಲ್ಲ ?" ಎಂದು ಕೇಳಿದ ಗಂಗಣ್ಣ.

"ನನ್ಗೇನು ತಲೆ ತಿರುಗಿ ಹೋಗಿದೆಯೇನಯ್ಯ ?—ಮೇಲಕ್ಕೆ ಯಾರ್ ಹೋಗಬೇಕೋ - ಅವರೇ ಹೋಗಬೇಕು. ಉತ್ಸವಮೂರ್ತೀನಾ ಎಲ್ಲಾ ತಾವು ಸುತ್ತಿಸತಾರೆ ಅಂತ ಮೂಲವಿಗ್ರಹವನ್ನೂ ಹಂಗೇ ಮಾಡಲಿಕ್ಕಾದೀತಾ ?"

"ಬಲು ಚೂಟಿ ಇದ್ದೀರಿ, ಓಗ್ಲಿ ಬಿಡಿ."

ಗಂಗಣ್ಣ ಮಾತು ಮುಗಿಸುವ ಮೊದಲೇ ರಥದ ಅಚ್ಚು ಒಂದು ಕಡೆ ಮುರಿದು, ರಥ 45° ಓರೆಯಾಗಿ, ಮೇಲಿದ್ದವರ ಫಜೀತಿ ಏನೂಂತ ಹೇಳಲಿಕ್ಕಾಗಲೇ ಇಲ್ಲ.

"ಎಂದೂ ಹಿಂಗಾಗಿರ್ನಿಲ್ಲ" ಎಂದು ಬಹಳ ಜನ ಮಾತಾಡಿಕೊಂಡರು. ಗಂಗಣ್ಣನಿಗೆ ಹದಿನೈದು ದಿನ ಏನು ಮಾಡಬೇಕೋ ಗೊತ್ತಾಗಲೇ ಇಲ್ಲ. ಆಮೇಲೆ ಹಾಗೇ ಪುಟ್ಟಯ್ಯನವರ ಹತ್ತಿರ ಹೋಗಲು ಶುರುಮಾಡಿದ. ಎಷ್ಟೇ ಆದರೂ ಅವರೇ ತಾನೇ ಮೂಲ ವಿಗ್ರಹ? ಅವರೂ ತುಂಬಾ ನೊಂದುಕೊಂಡಿದ್ದರು. ರಥದ ಮೇಲಿದ್ದ ಅವರ ಕಿರಿಯ ಹುಡುಗನ ಸ್ಥಿತಿ ಚಿಂತಾಜನಕವಾಗಿದ್ದು, ಇನ್ನೂ ಯಾವ 'ಘಟ್ಟ'ವನ್ನೂ ಹತ್ತಿರಲಿಲ್ಲ.

"ನೀವು ಮಗನ ಯೋಚನೆ ಮಾಡೋದೇನೊ ಸರಿ, ಆದರೆ ಊರವರ ವಿಷಯಾನೂ ಯೋಚಿಸಬೇಡವೆ?" ಎಂಬ ಅರ್ಥ ಬರುವಂತೆ ಗಂಗಣ್ಣ ಮಾತಾಡಿದ. "ಈ ರಥ ಯಾವನು ಮಾಡಿದವನು, ಅವನನ್ನು ಮೊದಲು ತರಾಟೆಗೆ ತಗೊಳ್ಳಿ" ಎಂದೂ ಅಂದ.

ಪುಟ್ಟಯ್ಯನವರಿಗೆ ಬವಳಿ ಬಂದ ಹಾಗಾಯಿತು. "ಎಲ್ಲಾ ಹುಡುಗು ಹುಡುಗು, ಹೇಳೋರಿಲ್ಲಾ, ಕೇಳೋರಿಲ್ಲ" ಎಂದು ಗೊಣಗಿಕೊಂಡರು. (ಅವರಿಗೆ ಜೋರಾಗಿ ಒದರಾಡುವಷ್ಟು ಮನಸ್ಸೂ ಇರಲಿಲ್ಲ — ಅದರಿಂದಾಗುವ ಕೇಡೂ ಚೆನ್ನಾಗಿ ಗೊತ್ತಿತ್ತು.)

ಪುಟ್ಟಯ್ಯನವರ ಮಗನ ವಯಸ್ಸಿನ ಬೇರೆ ಹೈಕಳು ಮಾತ್ರ, "ತಮಗೆಲ್ಲ ಆಗ ಬಾರದ ಅನ್ಯಾಯ ಆಗಿಹೋಯ್ತು" ಎಂದು ರೋದಿಸಿದರು.

ಅವರಲ್ಲಿ ಕೆಲವರು ಮಾತ್ರ ರಥದ ಮುರಿದುಹೋದ ತುಂಡು ತುಣುಕುಗಳನ್ನು ಆಗಲೇ ಶೇಖರಿಸಿದರಂತೆ. ಅದು ಅವರೆಲ್ಲರ ಮನಸ್ಸಿನ ಆಶೋತ್ತರವಾಗಿ ಉಳಿಯಲಿದೆ, ಎಂದು ಅನೇಕ ಉತ್ಸಾಹೀ ತರುಣರ ಅಭಿಪ್ರಾಯವಾಗಿದೆ.

## ೨. ಸ್ಥಾನಕಪೂಜೆ ಮಹೋತ್ಸವ ಕಂಪೆನಿಯ ಕಥೆ

"ಸರತಿಯ ಸಾಲಿನ ಮುಖ್ಯ ಲಕ್ಷಣವೇನಪ್ಪ ಬಾಳ್ಯಾ"

"ಸರತಿಯ ಸಾಲೂಂದರೆ ಅದಕ್ಕೆ ಸಾವಿರಾರು ಕಾಲುಗಳಿರ್ತವೆ, ಅದು ಅಂಕುಡೊಂಕಾಗಿ ಇರಬಹುದು, ಅದು ಹನುಮಂತನ ಬಾಲದ ತರಹ ಬೆಳೀತಾ ಹೋಗುತ್ತಿರುತ್ತದೆ...."

"ಲೇ ನಾನ್ ಕೇಳಿದ್ದೇನು, ನೀನು ಹೇಳ್ತಿರೋದು ಏನು ?"

"ನೀವು ಕೇಳಿದ್ದು ಮುಖ್ಯ ಲಕ್ಷಣ"

"ಹಂಗಾರೆ ಅದನ್ನು ಹೇಳೂದೂ ಬಿಟ್ಟು, ಇದೆಲ್ಲ ಏನನ್ನಲಿಕ್ಕೆ ಹತ್ತೀದಿ—"

ಬಾಳ್ಯಾನಿಗೆ ಮುಖಭಂಗವಾದ ಹಾಗಾಯಿತು. ತಾನು ಬಹಳೇ ಶ್ಯಾಣಾ ಎಂದು ಆತ ತಿಳಿದಿದ್ದ. ಒಂದು ನಿಮಿಷ ಯೋಚಿಸಿದ. ಕೂಡಲೇ ಏನೋ ಹೊಳೆದ ಹಾಗಾಯಿತು.

"ಸರತಿಯ ಸಾಲಿನ ಮುಖ್ಯ ಲಕ್ಷಣಾಂದರೆ, ಅದು ಚಲಿಸುತ್ತಾ ಇರಬೇಕು, ತನ್ನ ಎಲ್ಲ ಕಾಲಿಂದಲೂ ಚಲಿಸುತ್ತಾ ಇರಬೇಕು."

ಮಾಸ್ತರರಿಗೆ, ಈ ಎರಡು ವಾಕ್ಯಗಳೂ ಅತೀವ ಸಂತೋಷ ತಂದವು. "ಎಲ್ಲ ಕಾಲಿಂದಲೂ ಚಲಿಸ್ತಾ ಇರಬೇಕು. ಒಪ್ದೆ ಕಣ್ಲೇ ಮಗನೆ—" ಎಂದು ಲೊಟ್ಟೆ ಹೊಡೆದರು.

ಬಾಳ್ಯಾನಿಗೂ ಸ್ವಲ್ಪ ಸಂತೋಷಾಧಿಕ್ಯವೇ ಆಯಿತು, ಆದರೂ ಆತ ಮುಂದೆ ನಡೆದದ್ದನ್ನು ಮಾತ್ರ ನಿರೀಕ್ಷಿಸಿರಲಿಲ್ಲ. ಮಾಸ್ತರು ಬಾಳ್ಯಾನ ಕಿವಿ ಹಿಡಿದು, ಹತ್ತಿರದಲ್ಲೇ ಇದ್ದ ನ್ಯಾಯಬೆಲೆ ಅಂಗಡಿಯತ್ತ ಕರೆದೊಯ್ದರು.

"ಇಲ್ಲಿ ನೋಡಿದೀಯೇನಲೆ, ಸರತಿಯ ಸಾಲು ಚಲಿಸೋದೇ ಇಲ್ಲ—ಆದರೂ ಅಂಗಡಿಯೊಳಗಿನ ಪದಾರ್ಥ ಮಾತ್ರ ಚಲಿಸ್ತಾನೇ ಇರತಾವೆ."

ಈ ವೇಳೆಗೆ ಅದೇನು ಕಾರಣವೋ, ಕ್ಯೂನಲ್ಲಿ ಕಾಯುತ್ತಿದ್ದ ಜನದ ಮಧ್ಯೆ ದೊಡ್ಡ ಗಲಾಟೆ ಶುರುವಾಯಿತು. ಕೆಲವರಿಗೆ ಏಟೂ ಬಿತ್ತು.

ಸ್ವಲ್ಪ ಹೊತ್ತಿನಲ್ಲೇ ಒಬ್ಬರು ಪುರ ಪಿತೃಗಳು ತಮ್ಮ ಕಾರಿನಲ್ಲಿ ಅಧಿಕಾರಿಗಳೊಂದಿಗೆ ದಯಮಾಡಿಸಿದರು. ಪೊಲೀಸರು ಈಗ ಕ್ಯೂನಲ್ಲಿದ್ದವರನ್ನು ಸರಿಯಾಗಿ ನಿಲ್ಲಿಸುವ ನೆಪದಲ್ಲಿ, ಕೆಲವರಿಗೆ ಲಾಠೀ ಸೇವೆಯನ್ನು ಹಂಚಿದರು. ಪರಿಸ್ಥಿತಿ ಥಮ್ಮಣೆಗೆ ಬಂದ ಮೇಲೆ, ಪುರ ಪಿತೃ ಮಾತು ಶುರುಮಾಡಿತು.

"ನೀವೆಲ್ಲ ನಿಮ್ಮಪ್ಪನ ಮಕ್ಕಳದೀರಿ ಅಂತ ನನಗೆ ಗೊತ್ತು - ಪರಂತು - ನಾನೇನ್ ಹೇಳಾಕ್ ಹತ್ತೀನಿ ಅಂದರ - ನೀವು ಹಿಂಗೆಲ್ಲ ಜಗಳ ಮಾಡಬ್ಯಾಡದು. ನೀವು ಗಾಂಧೀ ಮಂದಿ ಇದ್ದೀರಿ - ರಾಮನ, ಕೃಷ್ಣನ ದೇಶದವರಿದ್ದೀರಿ - ನಿಮಗೆ ಪಾನಕ ಪನಿವಾರ ಉಪಹಾರ ಅಂದರ ಬಹಾಳ ಇಷ್ಟ. ಆದ್ದರಿಂದ ನಾವು ನಿಮ್ಮ ಆಸೆ ಆಕಾಂಕ್ಷೆಗಳನ್ನು ನಿವಾರಿಸಲು ಒಂದು ಯೋಜನಾ ಹಾಕ್ಕೊಂಡಿದೇವಿ - ಅದರೊಳಗೆ ಮೊದಲ ಯೋಜನಾನ - ಪಾನಕಪೂಜೇದು. ನಮ್ಮ ಸ್ನೇಹಿತರು ಒಬ್ಬರದಾರ. ಅವರು ಬಹಳೇ ಶ್ರೀಮಂತರಿದ್ದರೂ, ಬಡವರನ್ನ ಕಂಡರೆ ಮೇಲೇ ಬೀಳ್ತಾರ - ಅವರ ಕೂಟ ನಾವೊಂದು, ನಿಮ್ಮಗಳ ಸಲುವಾಗಿ ಪಾನಕದ ಕಂಪೆನಿ ತೆಗೀಲಿಕ್ಕೆ ಕೈ ಹಾಕೀವಿ. ಇದರೊಳಗ ಪ್ರಪಂಚದ ಅತ್ಯಂತ ದೊಡ್ಡ ಪ್ರಜಾಪ್ರಭುತ್ವ ಏನದ ಅಲ್ಲೀ ಶ್ರೀಮಂತರದ್ದೂ

ಕೈವಾಡ ಅದೇ. ಅದೇ ಅಂದರೆ ಬರೀ ಅದೆ ಅಂತ ತಿಳೀಬ್ಯಾಡ್ರೀ—ಈ ದೇಶದಾಗ ಡಿಮೋಕ್ರಸಿ ಆಳವಾಗಿ ಬೇರು ಬಿಡಬಕು ಅನ್ನೋ ಕಾರಣದಿಂದಲೇ ನಾವೀ ಪಾನಕ ಕಂಪೆನಿ ಯೋಜನಾ ಹಾಕ್ಕೀವಿ."

"ಈ ಕಂಪನಿ ಶುರು ಆತು ಅಂದರ—ನೀವ್ಯಾರೂ ಹಿಂಗ ಸಾಲುಗಟ್ಟಿ ನಿಲ್ಲೂದೇ ಬ್ಯಾಡ. ಈಗಲೇ ನೀವಿಲ್ಲಿಂದ ಹೊರಟುಹೋಗಿ ಪಾನಕದ ಚೀಟಿ ತಗೊಳ್ಳಬೇಕು. ಅದರಿಂದ ನಿಮ್ಮ ಸಕ್ಕರೀ ಸಮಸ್ಯಾನೇ ಇಲ್ಲದಂಗಾಗ್ತೈತೆ. ನೀವೆಲ್ಲ ಹಿಂಗ ಬಿಸಿಲಲ್ಲಿ ಒಣಗಿ, ಮಳೆಯಾಗ ತೊಯ್ಯೋದು ಅಂದರೆ ನಮಗೆ ಆಗೂದಿಲ್ಲ. ನ್ಯಾಯಬೆಲೆ ಅಂಗಡಿ ಬಾಗಿಲಾ ಮುಚ್ಚುವಲ್ಲಾಕೆ—ನಿಮ್ಮ ಮನಿಬಾಗಿಲಿಗೇ ಪಾನಕ ಬರ್ತೈತೆ ಅಂತ ಅಂದ ಮ್ಯಾಲೆ?"

ಎಲ್ಲಿಂದಲೋ ಮೂರುನಾಲ್ಕು ಕಲ್ಲುಗಳು ಸೇರಿದ್ದ ಜನದ ಮೇಲೆ ಬಿತ್ತು. ಅವರಲ್ಲಿ ಗಾಬರಿ ಹೊಕ್ಕಿತು. ಪೊಲೀಸ್ ಅಲ್ಲೇ ಇದ್ದರೂ ಅವರ ಲಕ್ಷ್ಯ ಎಲ್ಲ ಭಾಷಣಕಾರನ ಬಗ್ಗೆ ಮಾತ್ರ ಇತ್ತು. ಮುಂದೆ?

ಮಾತನಾಡುತ್ತಿದ್ದವನು ಹೊರಟುಹೋದ. ಅಂಗಡಿಯುವನು ಬಾಗಿಲು ಮುಚ್ಚಿದ. ಹೊಡೆದಾಟ ಜಾಸ್ತಿಯಾಯಿತು. ಲಾಠೀ ಸೇವೆ ಸರಿಯಾಗಲಿಲ್ಲವೆಂದು ಪೊಲೀಸರು ಗುಲಿಕಾ ಪ್ರಹಾರ ಮಾಡಿದರು. ಸತ್ತವರ ಸಂಖ್ಯೆ ಅಧಿಕೃತವಾಗಿ ಪ್ರಕಟಿಸ ಲಾಗಲಿಲ್ಲ.

———

"Once again I returned to my country, third class. In Latin America there were no eminent writers, like Celine, Drieu La Rochelle, or Ezarapound, who turned traitor to serve Fascism, but there was a strong Fascist movement nurtured, with or without financial aid, by Hitlerism. Groups sprang up every where whose members dressed like storm troopers and raised their arm in the Fascist salute".

—PABLO NERUDA

# ಅನಾಮಧೇಯ ಕಲಾವಿದರೊಡನೆ ಒಂದು ಸಂಭಾಷಣೆ

—ಕ್ಷೀರಸಾಗರ

ಮೊನ್ನೆ ಬೆಂಗಳೂರಿನ ಒಬ್ಬರು ಕಲಾವಿದರೊಡನೆ ಮಾತಾಡುತ್ತಿದ್ದಾಗ, ಅವರು ಕಲೆ ಹಾಗೂ ಚಿತ್ರ ಕಲೆಯ ಬಗ್ಗೆ ಅಭಿವ್ಯಕ್ತಿಸಿದ ಭಾವನೆಗಳನ್ನು ನಿಮ್ಮೊಡನೆ ಹಂಚಿಕೊಳ್ಳಬೇಕು ಎನ್ನಿಸುತ್ತಿದೆ. ಇತ್ತೀಚೆಗೆ ಕಲೆಯನ್ನು—ಉದ್ದೇಶಿತ ಸಾಮಾಜಿಕ ಬದಲಾವಣೆಗಾಗಿ ಬಳಸಿಕೊಳ್ಳುವುದರ ಬಗ್ಗೆ ಹಲವಾರು ರೀತಿಯ ಪರ ಮತ್ತು ವಿರೋಧ ಧ್ವನಿಗಳು ಏಳುತ್ತಿರುವುದರ ಹಿನ್ನೆಲೆಯಲ್ಲಿ ಅವರ ನಿಲವು ಕೆಲವು ಮಟ್ಟಿಗೆ ಹೊಸ ದೃಷ್ಟಿಕೋನಗಳನ್ನು, ಕಲೆಯ ಹಲವಾರು ಆಯಾಮಗಳನ್ನು ಬಿಡಿಸಿ ತೋರಿಸುವುದರಿಂದ ಈಗ ಪ್ರಚಲಿತವಾಗಿರುವ ಕಲೆಯ ಸಮಸ್ಯೆಗೆ ಸ್ವಲ್ಪ ಮಟ್ಟಿನ ಉತ್ತರವಾಗಬಹುದು. ಎಂದು ಕೊಂಡಿದ್ದೇನೆ.

ಅವರು ವ್ಯಕ್ತಿಯಾಗಿ ತಮ್ಮ ಹೆಸರನ್ನು ಹೇಳಲು ಇಚ್ಛಿಸಲಿಲ್ಲ. ಯಾಕೆ ಹೀಗೆ ಅಂತ ಕೇಳಿದೆ "ನನ್ನ ಕಲೆಯಲ್ಲಿ ನನ್ನ ಹೆಸರಿರುವ ಈ ವ್ಯಕ್ತಿಯ ಅಂದರೆ ನನ್ನ ಗುರುತಿಸುವಿಕೆ ಅಗತ್ಯವಾಗುವುದಿಲ್ಲ. ಬಹಳಸಾರಿ ಪ್ರೇಕ್ಷಕರು ಕಲೆಯನ್ನು ಗಮನಿಸುವಾಗ ಅದರ ವಸ್ತುಗತ ಮೌಲ್ಯವನ್ನು ಕಲಾವಿದನ ಹಿಂದಿನ ಕೊಡುಗೆಯ ಜೊತೆಗೆ ಮಿಳಿತಗೊಳಿಸಿ ಅಥವಾ ಈಗಾಗಲೆ ಅವನ ಬಗ್ಗೆ ಹೊಂದಿದ ಭಾವನೆಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಚಿತ್ರವನ್ನು ಅಳೆಯಬಹುದು. ಹೀಗಾದಾಗ ಚಿತ್ರದ ನಿಜವಾದ ಅಭಿವ್ಯಕ್ತಿ ಕೊಂಚ ಮಟ್ಟಿಗೆ ಪೂರ್ವಗ್ರಹಿತವಾಗಬಹುದು. ಇದು ಒಂದು ರೀತಿಯಲ್ಲಿ ಕಲೆಯ ಊನಕ್ಕೆ ಎಡೆಮಾಡಿಕೊಡುತ್ತದೆ. ಅದಕ್ಕೇ ನನ್ನ ಯಾವ ಕಲಾಕೃತಿಗಳಿಗೂ ನನ್ನ ಹೆಸರನ್ನು ಬರೆಯುವುದಿಲ್ಲ. ಅಲ್ಲದೆ ಮಾನವನ ಮೂಲಭೂತ ವಾಸನೆಗಳಲ್ಲಿ ಹೆಸರು ಗಳಿಸಿಕೊಳ್ಳುವುದೂ ಒಂದಾಗಬಹುದು. ಕ್ರಮೇಣ ಇದು ಅನ್ನ, ನೀರು ನಿದ್ರೆ ಲೈಂಗಿಕತೆ ಮುಂತಾದ ಅಂಶಗಳಂತೆ ಒಂದು ಅಗತ್ಯವಾಗಿ ಬಿಡಬಹುದು. ಆಗ ಕಲಾವಿದ ಹೆಸರಿನ ಪ್ರಖ್ಯಾತಿಯ ತೃಪ್ತಿಗಾಗಿಯೇ ಚಿತ್ರಿಸುವ ಹವ್ಯಾಸವನ್ನು ಒಂದು ಅಗತ್ಯ ಅಂಶವಾಗಿ ಮಾಡಿಕೊಂಡರೆ ಕಲೆಯ ಸ್ಥಿತಿ ಏನಾಗಬಹುದು ಅಂತ ನಿಮಗೇ ಗೊತ್ತು. ಕಲೆಯ ಸೃಜನಶೀಲತೆ ಹಾಗೂ ಒಳಗೊಳ್ಳುವ ವಸ್ತುವಿನ ಬಗ್ಗೆ ಮಾತಾಡುತ್ತ "ಕಲೆಯಲ್ಲಿ ಅಭಿವ್ಯಕ್ತವಾಗುವುದು ಕಲಾವಿದ ಈ ಸಮಾಜದಿಂದ ಪಡೆದುಕೊಳ್ಳುವ ಅನುಭವಗಳು ಹಾಗೂ ಕಾಣುವ ಸ್ಥಿತಿಗಳನ್ನು. ಸಮಾಜದಲ್ಲಿ ಕಾಣುವ ಅನುಭವಗಳನ್ನು ಯಾವುದೋ ಸ್ಥಿತಿಯಲ್ಲಿ ಸಂಘಟಿಸುವ ಕ್ರಿಯೆಗೆ ಒಳಗು ಮಾಡಿ ತನ್ನ ಸೀಮಿತ ದೃಷ್ಟಿಕೋನಗಳನ್ನು ಭಾವನೆಗಳನ್ನು ಕೆಲವು ಸ್ತರಗಳಲ್ಲಿ ಅಭಿವ್ಯಕ್ತಿಸಲು ಪಡುವ ಪ್ರಯತ್ನವೇ ಕಲೆ. ಈ ಹಂತದಲ್ಲಿ ಕಲಾವಿದ ಬಾಹ್ಯ ಮತ್ತು ಆಂತರಿಕ ಅನುಭವಗಳನ್ನು ಸಮಷ್ಟಿಗೆ ಮುಟ್ಟಿಸುವ ಒಂದು ಮಾಧ್ಯಮವಾಗುತ್ತಾನೆ. ಆದರೆ ಈ ಮಾಧ್ಯಮ ಒಂದು ವಿಶಿಷ್ಟ ರೀತಿಯ ಗುಣ

ಹೊಂದಿದೆ. ಕಲಾವಿದ ಒಬ್ಬೆಯ ವಸ್ತುಸ್ಥಿತಿಯನ್ನು ಕಾಪಿ ಮಾಡುವ ಕ್ಯಾಮರಾ ಅಲ್ಲ. ಒಂದೊಂದು ಘಟನೆಯನ್ನೂ ಸಮಷ್ಟಿಗೆ ಸಂಬಂಧಿಸಿ ಸಾಧ್ಯವಿರುವ ತಾದಾತ್ಮ್ಯಗಳನ್ನೂ ದ್ವಂದ್ವಗಳನ್ನೂ ಗುರುತಿಸಿ 'ಹೇಗೆ' ಎನ್ನುವುದಷ್ಟನ್ನೇ ಚಿತ್ರಿಸದೆ 'ಯಾಕೆ' ಎನ್ನುವ ತಿಣಕಾಟದ ಸಾಧ್ಯತೆಯನ್ನು ಅಭಿವ್ಯಕ್ತಿಸಬಲ್ಲ.

ಚಿತ್ರಕಲೆಯ ಪ್ರಪಂಚ ಹೆಚ್ಚು ಹೆಚ್ಚು ಪ್ರಚಲಿತವಾದಂತೆ ಹೊಸ ಸನ್ನಿವೇಶಗಳನ್ನು ಒಳಗೊಳ್ಳುತ್ತಿದ್ದಂತೇ ಹಿಂದಿನ ಸಂಕೇತಗಳು ಹಳೆಯ ನಾಣ್ಯಗಳಾಗುತ್ತವೆ. ಅವಕ್ಕೆ 'ಪಾಲಿಶ್' ಕೊಡಬೇಕು. ಕೆಲವೊಮ್ಮೆ ಅದೇ ಸಂಕೇತಗಳು ಬೇರೆ ಸನ್ನಿವೇಶಗಳಲ್ಲಿ ಅಭಿವ್ಯಕ್ತಿಸಿದಾಗ ಹೊಸದಾದ ಒಂದು ಅರ್ಥವನ್ನೇ ಹುಟ್ಟಿಸಬಹುದು. ಉದಾಹರಣೆಗೆ ಆಲದಮರದ ಬಿಳಿಲುಗಳು ಹಿಂದಿನ ಹಳೆಯ ಮೌಲ್ಯಗಳ ಸಂಕೇತವಾಗಬಹುದು. ಇದೇ ಆಲದ ಮರದ ಬಿಳಿಲುಗಳು ಒಂದು ಫ್ಯಾಕ್ಟರಿಯ ನಡುವೆ ಬೆಳೆದಾಗ ಬಂಡವಾಳಶಾಹಿಯು ಕಾರ್ಮಿಕರನ್ನು ಆಕ್ಟೋಪಸ್ ರೀತಿಯ ಶೋಷಣೆ ಮಾಡುವ ಸ್ಥಿತಿಯ ಸಂಕೇತವಾಗ ಬಹುದು. ಹೀಗೆ ಸಂಕೇತಗಳು ಜಡವಾಗಿರುವುದಿಲ್ಲ.

ನಿಮ್ಮ ಚಿತ್ರಗಳಲ್ಲೆಲ್ಲಾ ಪ್ರಮುಖವಾಗಿ ಮನುಷ್ಯದೇಹದ ಅಂಗಾಗಗಳನ್ನೇ ಹೆಚ್ಚಾಗಿ ಬಳಸಿಕೊಂಡಿದ್ದಿರೇಕೆ ? ಅಂತ ಅನ್ನುವ ಪ್ರಶ್ನೆಗೆ ಅವರು ಹೇಳಿದ ಮಾತುಗಳು ಹೆಚ್ಚು ಆಸಕ್ತಿ ಹುಟ್ಟಿಸಿದವು. ಅವರು "ನೀವು ಈ ಪ್ರಶ್ನೆ ಕೇಳಿದಾಗ 'ಬ್ರೆತೂನ್' ಹೇಳುವ ಮಾತು ನೆನಪಾಗುತ್ತದೆ. ಜನತೆಯಿಂದ ದೂರವಿರುವ ಯಾವುದೇ ಕಲೆಯಾಗಲಿ ಬೌದ್ಧಿಕ ಕ್ರಿಯೆಯಾಗಲಿ ಹೆಚ್ಚು ಅಪಾಯಕಾರಿ. ಇದು ಹೆಚ್ಚೆಚ್ಚು ವ್ಯಕ್ತಿಗತವಾಗುತ್ತಾ ಹೋಗಿ ಜನತೆಯ ಶೋಷಣೆಯ ಸಂಬಂಧಗಳನ್ನು ಅವರ ಪ್ರತಿಭಟನೆಯಿಂದ, ಸಿಡಿಯುವ ಗುಣಗಳನ್ನು ವ್ಯಕ್ತ ಪಡಿಸದೇ ಬಂಡವಾಳಶಾಹಿಗೆ ಅನುಕೂಲವಾಗುವ ಈ ಏಕ ವ್ಯಕ್ತಿ ಪ್ರಮುಖವಾಗುವ ಕಲೆಯನ್ನು ಸೃಷ್ಟಿಸಬಹುದು.

ಈ ಹಿನ್ನೆಲೆಯಲ್ಲಿ—ಮನುಷ್ಯನ ಅಂಗಾಂಗಗಳು ಅವರ ಭಾವನೆಯ, ಅವರ ಸ್ಥಿತಿಯ, ನೋವಿನ ಅಭಿವ್ಯಕ್ತಿ ಸಾಧನಗಳಾಗಿರುವುದರಿಂದ ಜನತೆಯ ಬಗ್ಗೆ ಹೇಳ ಬೇಕೆಂದರೆ, ಜನತೆಗಾಗಿ ಹೇಳ ಬೇಕೆಂದರೆ ಮನುಷ್ಯ ಅಂಗಾಂಗಗಳನ್ನು ಬಳಸಿಕೊಳ್ಳಲೇ ಬೇಕಾಗುತ್ತದೆ. ಒಂದೊಂದು ಬಿಡಿ ದೇಹದ ವಿನ್ಯಾಸವೂ ಕೂಡ ಪೂರ್ಣವಾಗಿ ದೇಹದ ಇತರ ಭಾಗಗಳ ವಿನ್ಯಾಸವನ್ನೂ, ಭಾಗವನ್ನೂ ಅಭಿವ್ಯಕ್ತಿಸಲು ಶಕ್ತವಾಗುತ್ತದೆ. ಇದು ಮಾನವ ದೇಹದ ಅಂಗಾಂಗಗಳ ಸಾಂಕೇತಿಕತೆಯಲ್ಲಿ ಮಾತ್ರ ಹೆಚ್ಚಾಗಿರುವ ವಿಶಿಷ್ಟ ಅಂಶ. ಉದಾ : ಬಿಗಿಗೊಂಡ ನರಗಳು ಉಬ್ಬಿಕೊಂಡ ಬೆರಳುಗಳು ಕೊಂಚ ಬಾಗಿ ಪಸರಿ ಕೊಂಡು ಮೇಲೆದ್ದ ಕೈ. ತನಗೆ ಆಗುತ್ತಿರುವ ನೋವಿನ ವಿರುದ್ಧ ತೋರ್ಪಡಿಸಿಕೊಂಡ ಪ್ರತಿಭಟನೆಯ ಒಂದು ಮಾನಸಿಕ ಸ್ಥಿತಿ ಎಂದು ಗುರುತಿಸಬಹುದು. ಜೊತೆಗೆ ಬರೀ ಕೈ

ಒಂದೇ ಕೈ. ಮುಖ ಮತ್ತು ಇತರ ಅಂಗಾಂಗಗಳ ಸ್ಥಿತಿ ಹಾಗೂ ವಿನ್ಯಾಸವನ್ನೂ ಹೇಳಬಹುದು. ಹೀಗೆ ದೇಹದ ಒಂದು ಅಂಗ ಒಟ್ಟಾರೆ ಮಾನವ ದೇಹವನ್ನೂ, ಅವನ ಅವಸ್ಥೆಯ ಅಂಶಗಳನ್ನು ಹೇಳಲು ಶಕ್ತವಾಗಿದೆ.

ಈ ತರದ ಕಲೆ ಪ್ರೇಕ್ಷಕರಿಗೆ ತಮ್ಮ ಅನುಭವಗಳನ್ನು 'ರಿಲೇಟ್' ಮಾಡಿಕೊಳ್ಳಲು ಹೆಚ್ಚು ಅನುವುಮಾಡಿಕೊಡುತ್ತದೆ. ಒಂದೇ ಚಿತ್ರ ಬೇರೆ ಬೇರೆ ಜನಕ್ಕೆ ಬೇರೆ ಬೇರೆ ಅರ್ಥಗಳನ್ನು ಭಾವನೆಗಳನ್ನೂ ಹುಟ್ಟಿಸಬಹುದು. ಇಂಥ ಕಲೆಗೆ ಹೆಚ್ಚು ಅರ್ಥ ಬರುವುದು, ತುಳಿತಕ್ಕೊಳಪಟ್ಟ ಜನ ತಮ್ಮನ್ನು ತಮ್ಮ ಸ್ಥಿತಿಯನ್ನು ಇಲ್ಲಿ ಕಂಡುಕೊಂಡಾಗ. ಇದು ಈಚೆಗೆ ಹೆಚ್ಚು ಜನ ಅಗತ್ಯ ಕಲೆಯಾಗಿರುವ 'ಸರ್ರಿಯಲಿಸಮ್'ಗೆ ಹತ್ತಿರವಿದೆ.

'ಸರ್ರಿಯಲಿಸಮ್' ತನ್ನ ಪ್ರಯತ್ನಗಳಲ್ಲಿ ಕಾರ್ಮಿಕರ ಮೇಲೆ ಪ್ರಭಾವ ಬೀರಿರುವ ಬಂಡವಾಳಶಾಹಿ ಕಲೆಯ ಭ್ರಮೆ ಬಿಡಿಸಿ ತಮ್ಮ ನಿಜವಾದ ಜೀವನ ಕಲೆಯ ಬಗ್ಗೆ ಪರಿಚಯಿಸುವುದು. ಹಂತದಲ್ಲಿ ಯಾವುದೇ ರೀತಿಯ ಪ್ರಚಾರಗಳಾಗಲಿ ಒತ್ತಡಗಳಾಗಲಿ ಇಲ್ಲದೆ ಕಾರ್ಮಿಕ ತನ್ನನ್ನು ತಾನು ಸ್ವತಂತ್ರವಾಗಿ ಗುರುತಿಸಿಕೊಳ್ಳಲು ಅನುವು ಮಾಡಿಕೊಡುವುದು. ಕಲೆಯು ಬೇರೆ ಬೇರೆ ಹಂತದ ಜನಗಳಿಗೆ ಮುಟ್ಟುವಂತಾಗಲು ಅವರ ಕಲಾಮಾಧ್ಯಮವನ್ನು ತೀರ ಹತ್ತಿರದಿಂದ ಅಭ್ಯಾಸ ಮಾಡಿ ಒಂದು ವರ್ಗ ಇನ್ನೊಂದು ವರ್ಗದ ಮೇಲೆ ಹೇರಿರುವ ಸಂಸ್ಕೃತಿಯ ಬಂಧನಗಳನ್ನು ಬಿಡಿಸಲು–ಅದೇ ಮಾಧ್ಯಮವನ್ನು ಬಳಸಿಕೊಂಡು ಜನರ ವಸ್ತು ಸ್ಥಿತಿಯ ಚಿತ್ರಗಳ ವಸ್ತುವನ್ನು ಬಳಸಿಕೊಂಡಾಗ ಈ ಕಲೆ ಅವರಿಗೆ ಹತ್ತಿರವಾಗುತ್ತದೆ.

ನಿಮ್ಮ ಕಲೆಯನ್ನು ನೋಡಿಯೂ ಕೂಡ ಜನ ಪ್ರತಿಕ್ರಿಯೆ ವ್ಯಕ್ತಪಡಿಸದಿದ್ದಾಗ ನಿಮ್ಮ ಕಲೆ ಅರ್ಥ ಹೀನವಾಗಬಹುದಲ್ಲವಾ? ಈ ಪ್ರಶ್ನೆಗೆ ಅವರು ಹೀಗೆ ಉತ್ತರಿಸಿದರು "ನೋಡಿ ಚಿತ್ರಕಲೆಯಾಗಲಿ, ನಾಟಕವಾಗಲಿ, ಕವಿತೆಯಾಗಲಿ, ಕಾದಂಬರಿಯಾಗಲಿ— ನೋಡಿದಾಗ ಅಥವಾ ಓದಿದಾಗ ಕೆಲವು ಭಾವನೆಗಳನ್ನು ಹುಟ್ಟಿಸುತ್ತವೆ. ಈ ಭಾವನೆಗಳನ್ನು ಪದಗಳ ಮಾಧ್ಯಮದ ಮೂಲಕ ಅವರು ಹೇಳಬೇಕೆಂದಿಲ್ಲ. ಪದದ ಮಾಧ್ಯಮವಿಲ್ಲದೆ ನೇರವಾಗಿ 'ರಿಲೇಟ್' ಮಾಡಿಕೊಳ್ಳಲು ಸಾಧ್ಯವಾಗುವ ಶಕ್ತಿ ಕಲೆಗಿದೆ. ಒಬ್ಬ ವ್ಯಕ್ತಿ ಕಲೆಯನ್ನು ನೋಡಿದಾಗ ತನ್ನ ಅನುಭವಗಳ ಭಾವನೆಗಳ ಹಿನ್ನೆಲೆಯಲ್ಲಿ ಇವುಗಳಿಗೊಂದು ದಿಕ್ಕು ಅಥವಾ ಅರ್ಥ ಕಂಡು ಕೊಳ್ಳಲು ಪ್ರಯತ್ನಿಸುತ್ತಾನೆ. ಕಲೆಯೂ ಅಷ್ಟೇ. ಅರ್ಥವನ್ನೂ ಭಾವನೆಯನ್ನೂ ಕೊಡುವ ತವಕ ಅದಕ್ಕೂ ಇದೆ. ಹೀಗಾಗಿ ಈ ತಿರುವಿನ ಘಟ್ಟದಲ್ಲಿ ಸಹೃದಯ ಅಭಿವ್ಯಕ್ತಿಸದೆಯೂ ಬೆಳೆಯುತ್ತಾನೆ."

# ತ್ರಿಂಗಳಕಾವ್ಯ

## ಅರ್ಜುನ ವಿಷಾದಯೋಗ

ತ್ರಿಲೋಕ ಸುಂದರಿಯ ಅಮೋಘ ನೃತ್ಯದ ವಿಧ ವಿಧ ಭಂಗಿಗೆ
ನಖಶಿಖಾಂತ ರಂಗೆದ್ದ ಮಗನ 'ಅವಸ್ಥೆ'ಯ ಕಂಡ
ಜಾಣ ದೇವತಂದೆ :
'ಕರೆದು (ಅದೇ) ಹೆಣ್ಣನ್ನು (ಏಕಾಂತಕ್ಕೆ ಕಳಿಸಿ) ಕೊಟ್ಟಾಗ'
ಮೂರು ಲೋಕವ ಗಂಡನಿಗೆ 'ಮಲರೋಗ' ಬಂದು
ಅಲಭ್ಯಲಭ್ಯ ಆ ಅಪ್ಸರೆಯ ಪದತಲದಲ್ಲಿ
'ಅಮ್ಮಾ' ಎಂದು (ನರ) ಕುಸಿದು ಬಿದ್ದ !

ಹಾಗೆ, ಆ ದೇವ ಮಟ್ಟಿಯಲಿ 'ಜಾರದ'
(ಭೂ) 'ಜಟ್ಟಿ'ಯು ಆ ಕುಸಿತ
ಭಗ್ನ ಹೃದಯಿಯ ಉಗ್ರ ಶಾಪದ ನೆಪದಲ್ಲಿ
ಮುಂದೆ ಬೃಹನ್ನಳೆಯು ಪಾತ್ರಕ್ಕೆ
ಒಳ್ಳೆಯದೊಂದು 'ಪಟ್ಟಾಯಿತು'
ನಿಜ
ಆದರೆ

ಪಿತೃರೂಪೀ ಅಣ್ಣನ 'ಸರದಿ'ಗಳಲ್ಲಿ
ಮಾತೃ ಸಮಕ್ಷಮ ಒಪ್ಪಿದ ಒಪ್ಪಂದದ ಬೇಲಿಯನ್ನು
ಆಗಾಗ ಮುರಿದು
ಆ ಅವಧಿಯ ಮಾತೃರೂಪೀ ಅತ್ತಿಗೆಯೆಡೆ ನುಗ್ಗುತ್ತಿದ್ದ
ಅದೇ ತಮ್ಮ :

ತನ್ನ ಒಡೆಯನಾಣತಿ ನೆಪಮಾತ್ರವಾಗಿ
ಒಳಗೊಳಗೇ ಹಿರಿ ಹಿಗ್ಗಿ
ಮರ್ತ್ಯದ ಮಹೋನ್ನತ ಶಿಖರವೊಂದರ
ಸ್ಪರ್ಶದಾಹ್ಲಾದದೇಕಾಂತ ದರ್ಶನಕ್ಕೆ
ಹಾತೊರೆದು ತೇಲಿ ಬಂದಂಥ ದೇವಗನ್ನೆಯ
ಕೆನ್ನೆಗೆ

ಹಾಗೆ 'ಅಮ್ಮಾ' ಎಂದಪ್ಪಳಿಸಿ
ಹಿಂ—ಮೆಟ್ಟಿದ್ದು
ಅದಾವ ಸೀಮೆಯ ಧರ್ಮ
ಕ್ಷೇತ್ರದ ವಿಷಾದ ಯೋಗ ? ಎಂಬುದು
ಮದನ ರಂಗನ ಕದನ ಕುತೂಹಲಿ ನಮ್ಮ
'ಸಂ–ಶಯನ' ಉವಾಚ ।

—ಬಿ. ರಾಜಣ್ಣ

*   *   *

## ನಾನು ಎಲ್ಲವನ್ನು ಮಾಡುತ್ತೇನೆ

ನಾನು ಎಲ್ಲವನ್ನೂ ಹೇಳುತ್ತೇನೆ.
ನಾನು ಎಲ್ಲವನ್ನೂ ಮಾಡುತ್ತೇನೆ.
ಬೆಳದಿಂಗಳಿಲ್ಲದ ರಾತ್ರಿಯಲ್ಲಿ
ಒಂಟಿಯಾಗಿ
ಅಥವಾ ನನ್ನ ಸಂಗಾತಿಗಳೊಂದಿಗೆ.

ನಾನು ಮಂಜು ಮತ್ತು ಹೊಗೆಯನ್ನು
ದ್ವೇಷಿಸುತ್ತೇನೆ.
ನನಗೆ ನನ್ನ ಕಣ್ಣ ಮುಂದಿನ ಪರದೆಯನ್ನು ಸೀಳಿ

ಒಂದೇ ನೆಗೆತದಲ್ಲಿ
ಮುನ್ನುಗ್ಗುವುದು ಬೇಕಾಗಿದೆ
ಅತಿ ಸಂಕಷ್ಟದ ದಾರಿಯಲ್ಲಿ ಒಂಟಿಯಾಗಿ
ಅಥವಾ ನನ್ನ ಸಂಗಾತಿಗಳೊಂದಿಗೆ.

ನಾನು ಸರಳ ಅರ್ಥಗಳನ್ನು
ವಿಕೃತಗೊಳಿಸುವುದನ್ನು,
ಸುತ್ತಿ ಬಳಸಿ ಎಳೆದಾಡುವುದನ್ನು
ಹೇಸುತ್ತೇನೆ
ನನ್ನ ಹೃದಯದಲ್ಲಿ, ಕಣ್ಣಿನಲ್ಲಿ
ಭಾವ ಭಂಗಿಯಲ್ಲಿ
ಕರ್ತವ್ಯದ ಅಚ್ಚನ್ನೊತ್ತಬೇಕಾಗಿದೆ
ಒಂಟಿಯಾಗಿ
ಅಥವಾ
ನನ್ನ ನೆಚ್ಚಿನ ಸಂಗಾತಿಗಳೊಂದಿಗೆ.

ನನ್ನ ಆದರ್ಶದ ಭದ್ರ ನೆಲೆಗಟ್ಟಿಗಾಗಿ
ನಾನು ಸೈನೆ, ವೊಲ್ಗಾ, ಯಾಂಗ್‌ಸಿ
ಮತ್ತು ಗಂಗೆಯ ತೀರದಲ್ಲಿ
ಹರಳುಗಳನ್ನು ಹುಡುಕುತ್ತೇನೆ
ಒಂಟಿಯಾಗಿ
ಅಥವಾ ನನ್ನ ಸಂಗಾತಿಗಳೊಂದಿಗೆ
ಮರೆಯದಿರು,
ನಾನು ನಿನನಾಗಿಯೂ ಕೂಡ
ಹರಳುಗಳನ್ನು ಹುಡುಕುತ್ತಿದ್ದೇನೆ.

—ಬಚ್ಚು ರಾಯ್ ಚೌಧರಿ
ಅನು—ಎನ್. ನಾರಾಯಣ್



ಶೂದ್ರ

# ಖಗ್ರಾಸ (ಬುದ್ಧಿ) ಗ್ರಹಣ

ಸೂರ್ಯನಿಗೆ ವಜ್ರ ಕಿರೀಟವ ತೊಡಿಸಿ, ತಕಪಕ
ಕುಣಿದ ಚಂದ್ರ. ಹಗಲು ಬೆಳದಿಂಗಳಿನ ಗುಂಗಿಗೆ
ಭೂಮಿಗನಿರೀಕ್ಷಿತ ಸರಳರೇಖೆಯ ಸುಖ—

ಎರಡೇ ನಿಮಿಷ. ನಿಂತ ಕಾಲಿನ ಮೇಲೆ ನೆರಳು
ಬೆಳಕಿನ ತೆರೆಗಳೋಟ. ನಾಯಿಯ ನರಳು. ದಿಕ್ಕು
ತಪ್ಪಿದ ಹಕ್ಕಿ. ಏರಿಸಿದ ಜೀರುಂಡೆ ಕೊರಳು.

ಮತ್ತೆ ತೇಜಃಪುಂಜ ಚಿಮ್ಮಿ, ತಕ್ಷಣವೆ ಹೊರ
ಬಿದ್ದ ಸೂರ್ಯ : ಮುಗಿಸಿ ಶತಮಾನದ ಮಹಾಕಾರ್ಯ.
ಇಳಿದಿತ್ತು ಒಳಗೇ ಕುಸಿದವರ ಎದೆಯ ಭಾರ.

ರಾಹು—ಕೇತುಗಳಿಂದ ಮೋಕ್ಷ ದೊರೆಯುವವರೆಗೆ
ಮುಚ್ಚಿಬಿಟ್ಟರು ಕಣ್ಣು : ನಿಸರ್ಗದದ್ಭುತಕ್ಕೆ.
ಶುಭಾಶುಭ ಗುಣಿಸಿ, ಸಾಗಿದರು ಬಚ್ಚಲು ಮನೆಗೆ.

ಸ್ವಯಂ ಪ್ರಕಾಶಕ್ಕೆ ನೆರಳು ಬಿದ್ದಂತೆ ಭಾಸ.
ನಮ್ಮ ಉಪಗ್ರಹಗಳೆ ನಮ್ಮ ಕಣ್ಣಿಗೆ ಮೋಸ.

—ಚೆನ್ನವೀರ ಕಣವಿ

# ಸಂಶಯ ಲೋಕದಲ್ಲಿ ಶೇಕ್ಸ್‌ಪಿಯರ್‌ನ ಹ್ಯಾಮ್ಲೆಟ್

—ಪುರುಷೋತ್ತಮ

17ರಂದು 'ಬೆನಕ' ಆಡಿದ ಹ್ಯಾಮ್ಲೆಟ್ ನಾಟಕ ಶೇಕ್ಸ್‌ಪಿಯರನ ಪ್ರಪಂಚಕ್ಕೆ ಕನ್ನಡ ಪ್ರೇಕ್ಷಕರ ಸಮರ್ಪಕ ಅನುಸಂಧಾನಕ್ಕೆ ಕಾರಣವಾಯಿತು. ಅನೇಕ ಶೇಕ್ಸ್‌ಪಿಯರ್ ನಾಟಕಗಳು ಬೇರೆ ಬೇರೆ ತಂಡಗಳಿಂದ ರಂಗ ಹತ್ತಿದ್ದರೂ ಯಾವುದೋ ಒಂದು ಮೊನೋಲಾಗ್, ದೃಶ್ಯವೈಭವ ಅಥವ ಸಣ್ಣದೊಂದು ಸನ್ನಿವೇಶದಲ್ಲಿ ಮಾತ್ರ ಶೇಕ್ಸ್‌ಪಿಯರನ್ನು ಕಾಣಬೇಕಾಗಿತ್ತು. ಈ ಮಾತನ್ನು ಬರಿದೆ ಹೊಗಳಿಕೆಗಾಗಿ ಹೇಳುತ್ತಿಲ್ಲ. ನಾಟಕ ಹೇಳುವುದು ಮತ್ತು ನಾಟಕ ಕಟ್ಟುವುದರ ನಡುವೆ ವ್ಯತ್ಯಾಸವಿದೆ. ಚೌಕಟ್ಟಿನಿಂದ ಚೌಕಟ್ಟಿಗೆ ಬದಲಾಗುವ, ದಟ್ಟವಾಗುವ ಮೂಡ್‌ಗಳು ನಾಟಕವನ್ನು ರೂಪಿಸುತ್ತವೆ. ಬಾದರದಿನ್ನಿ ಈ ನಾಟಕವನ್ನು ಕಟ್ಟುವ ಕೌಶಲ ಬೆರಗು ತರುವಂತದ್ದು.

ರಾಮಚಂದ್ರದೇವ 'ಹ್ಯಾಮ್ಲೆಟ್' ಅನುವಾದಿಸುವ ಪ್ರೇರಣೆ ಅದರ ಪರಸ್ಪರ ಸಂಶಯದ ಪ್ರಪಂಚ ಭಾರತಕ್ಕೆ ರೆಲವೆಂಟ್ ಆಗಿರುವುದೇ, ಎಂದಿದ್ದಾರೆ. ಬಹುಶಃ ಈ ಮಾತನ್ನು ನಾನು ಬೆನಕ ಫೋಲ್ಡರ್‌ನಲ್ಲೂ ನೋಡಿ ನಾಟಕದ ಬಗ್ಗೆ ಒಂದು ಪೂರ್ವ ನಿರೀಕ್ಷೆ ಇಟ್ಟುಕೊಂಡಿದ್ದರಿಂದ ಇಡೀ ನಾಟಕವನ್ನು ಒಂದೇ ಅರ್ಥಸ್ತರದಲ್ಲಿ ಗ್ರಹಿಸಿದೆ. ಅದು ಮಹತ್ವಾಕಾಂಕ್ಷೆ ಮತ್ತು ತೊಡಕುಗಳ ಲೋಕದ ನಾಟಕ. ಭೀಕರ ಪರಿಣಾಮಗಳಿಗೆ ಎರವಾಗುವ ಸಂಶಯ ಮತ್ತು ವಿಷಮಯ ವಾತಾವರಣದ ನೋವು. ಈ ನಾಟಕದ ದ್ವೇಷ, ಪ್ರೇಮ, ಹೊಂಚು ಸಂಚುಗಳು ಮನುಷ್ಯರ ಪ್ರವೃತ್ತಿಗಳನ್ನು ಸುಲಿದು ತೋರಿಸುವಂತ ಶಕ್ತಿಶಾಲಿ ದೃಶ್ಯಗಳನ್ನು ನಿರ್ಮಿಸುತ್ತವೆ. ಒಳದೃಷ್ಟಿ, ಒಳದನಿ

ಎರಡೂ ಸಫಲವಾಗಿ ದುಡಿದಿರುವ ಕೃತಿ. ಅನೇಕ ವ್ಯಾಖ್ಯಾನಗಳಿಗೆ ಈಗಲೂ ತೆರೆದು ಕೊಂಡದ್ದು. ಬಹುಶಃ ಶೇಕ್ಸ್‌ಪಿಯರನ ಮಿಕ್ಕೆಲ್ಲ ನಾಟಕಗಳ ಹಾಗೆಯೇ ಈ ನಾಟಕ ಸಹ ಪ್ರದರ್ಶಕನಿಗೆ ಬಹುದೊಡ್ಡ ಸವಾಲು. ಬಾದರದಿನ್ನಿಯವರದು ಖಾಲಿ ದಿಟ್ಟತನ ಅಲ್ಲ ಎನ್ನುವುದು ನಾಟಕ ಆರಂಭವಾದ ಕೆಲವೇ ಕ್ಷಣಗಳಲ್ಲಿ ಅರಿವಿಗೆ ಬರುತ್ತದೆ.

'ಹ್ಯಾಮ್ಲೆಟ್' ಆಗಿ ಶ್ರೀನಿವಾಸಪ್ರಭು ಬಹಳಕಾಲ ನೆನಪಲ್ಲಿ ಉಳಿಯುವ ಪ್ರದರ್ಶನ ನೀಡಿದರು. ಕತ್ತಿಯ ಮೊನಚಿಗೆ, ವೇದನೆಗೆ ಬೇಕಾದ ಚುರುಕುತನ, ಮತ್ತು ವಿಷಾದ ಅವರ ಮಾತುಗಳಲ್ಲಿ ನಡೆಯಲ್ಲಿ ಕಾಣುತ್ತಿತ್ತು. ಪ್ರಭು ಅವರ ಸೂಪರ್ ಲೆಟಿವ್ ಪರ್‌ಫಾರ್ಮನ್ಸ್ ಬಹಳ ಕಾಲ ಅವರನ್ನು ಹ್ಯಾಮ್ಲೆಟ್ ಗುಂಗಿಗೆ ತಳ್ಳದಿರಲಿ. ಇಡೀ ಡೆನ್ಮಾರ್ಕಿನ ಬಂದಿ ಅವಸ್ಥೆ ದೃಶ್ಯದಿಂದ ದೃಶ್ಯಕ್ಕೆ ಎಳೆಎಳೆಯಾಗಿ ಸ್ಪಷ್ಟ ವಾಯಿತು.

ವೇಗದ ಮಾತುಗಳ ಪೊಲೋನಿಯಸ್ ಕ್ಲಾನಿಷ್‌ಗೆಶ್ಚರ್‌ಗಳನ್ನು ಕಡಿಮೆ ಮಾಡ ಬಹುದಾಗಿತ್ತು. ಹ್ಯಾಮ್ಲೆಟ್‌ನ ಪ್ರಿಯತಮೆ ಒಫಿಲಿಯಾ ಮತ್ತು ತಾಯಿ ಗರ್ಟ್ರೂಡ್ (ಪದ್ಮಿನಿ ಮತ್ತು ನಳಿನಿಮೂರ್ತಿ) ಇಬ್ಬರೂ ಹ್ಯಾಮ್ಲೆಟ್‌ಗೆ ಒಳ್ಳೆಯ ಬೆಂಬಲ ನೀಡಿ ದರು. ಕ್ಲಾಡಿಯಸ್ ನಟನೆಯಲ್ಲಿ (ವೆಂಕಟೇಶ್ ಪ್ರಸಾದ್) ಅನುಭವದ ಕೊರತೆ ಇತ್ತು. ಒಫಿಲಿಯಾ ಹುಚ್ಚು ಹಿಡಿದ ಬಳಿಕ ಸಂಕೇತ ಮಾತುಗಳ ಹಾಡು ಹೇಳುವುದು ಸರಿಯಾಗಿ ನಿರೂಪಿತವಾಗಲಿಲ್ಲ. ಕೋಡಂಗಿಗಳು ಗೋರಿ ಅಗೆಯುವ ದೃಶ್ಯ ಮತ್ತು ಒಫಿಲಿಯಾ ಶವಸಂಸ್ಕಾರದ ದೃಶ್ಯ ಅದ್ಭುತವಾಗಿ ಮೂಡಿಬಂತು. ಹಾಗೆಯೇ ಭೂತದ ಜತೆಗೆ ಹ್ಯಾಮ್ಲೆಟ್‌ನ ಮುಖಾಮುಖಿ ಸನ್ನಿವೇಶ ಸಹ. **ಭೂತ ಮಾತಾಡುವ** ಮೊದಲ ಸನ್ನಿವೇಶದಲ್ಲಿ ಮೇಳದ ಜನರ ಸಹಾಯದಿಂದ ನಿರ್ಮಿಸಲಾದ ವಿಲಕ್ಷಣ ಆವರಣದಲ್ಲಿ ಬಿಗಿದ ನರಗಳ ವೇದನೆ, ಹೇಳಲಾಗದ ಅಳಲು ಮತ್ತು ಸೇಡಿನ ಹಂಬಲ ವ್ಯಕ್ತವಾಗುತ್ತಿತ್ತು. (ಬೆಳಕು ಚಂದ್ರಕುಮಾರ್‌ಸಿಂಗ್)

ಹ್ಯಾಮ್ಲೆಟ್ ಕೇವಲ ಒಂದು ದುರಂತ ಚಿತ್ರವಲ್ಲ. ದ್ವೇಷದ ವಿಷದಲ್ಲಿ ಮುಳುಗುವ ಲಾರ್ಟೆಸ್, ಕ್ಲಾಡಿಯಸ್ ಮಹಾರಾಜನ ರಾಜಕಾರಣ ಮತ್ತು ಮಹತ್ವಾ ಕಾಂಕ್ಷೆ, ಒಫೀಲಿಯಾಳ ಪ್ರೇಮ ದುರಂತ ಮತ್ತು ಎಲ್ಲ ತರ್ಕಗಳ ಸೋಲನ್ನು ಸೂಚಿಸುವ ಹ್ಯಾಮ್ಲೆಟ್‌ನ ಅಂತ್ಯದ ನಡುವೆ ಸಹ ಹೊರೇಷಿಯೋ ಉಳಿದುಕೊಳ್ಳುತ್ತಾನೆ ಸೌಜನ್ಯ ಮತ್ತು ವಿಶ್ವಾಸದ ಪ್ರತೀಕವಾಗಿ. ಆದರೆ, ಶೇಕ್ಸ್‌ಪಿಯರಿಯನ್ ಪ್ರಯೋಗ ಗಳು ಕೋಪ ನಾಟಕಗಳೇ ಏಕಾಗಬೇಕು ಎನ್ನುವ ಸಂಶಯ ಉಳಿದುಕೊಳ್ಳುತ್ತೆ.

ಒಟ್ಟಿನಲ್ಲಿ ಹ್ಯಾಮ್ಲೆಟ್‌ನ ಸಂಶಯಲೋಕದಲ್ಲಿ ಬೆಳಗಿದ್ದು ಬಾದರದಿನ್ನಿ ಮತ್ತು ಶ್ರೀನಿವಾಸಪ್ರಭು.

○

# ಪ್ರೇಮಚಂದ್-ಕಟ್ಟೇಮನಿ-ಅಮೃತರಾಯ್-ಕಫನ್ ಇತ್ಯಾದಿ

—ಶೂದ್ರ ಶ್ರೀನಿವಾಸ್

ದಿ|| ಪ್ರೇಮಚಂದ್ ನಾನು ಮೆಚ್ಚುವ ಲೇಖಕರಲ್ಲೊಬ್ಬರು. ಈ ಮನುಷ್ಯ ಹಿಂದೀ ಸಾಹಿತ್ಯ ರಂಗಕ್ಕೆ ಅಪೂರ್ವವಾದ ಕೊಡುಗೆಯನ್ನು ಕೊಡುವುದರ ಮೂಲಕ ಓದುಗರ ನೆನಪಿನ ಸ್ಥಾಯಿತ್ವಕ್ಕೆ ಬೇರುಕೊಟ್ಟವನು. ಇಂದಿನ ಸಂದರ್ಭದಲ್ಲಿ ಅನುಭವದ ದೃಷ್ಟಿಯಿಂದ ಭಾರತದ ಯಾವ ಭಾಷೆಯ ಸಾಹಿತಿಯೂ ಪರಕೀಯನಲ್ಲ. ಈ ಮಾತಿನ ಅರ್ಥ ಭಾರತೇತರ ಲೇಖಕರು ಪರಕೀಯರು ಎಂಬ ಅರ್ಥವಲ್ಲ. ನಾನು ಪ್ರೇಮಚಂದರ ಕೃತಿಗಳನ್ನು ಓದುವಾಗಲೆಲ್ಲ; ಇವರನ್ನ ಶಿವರಾಮ ಕಾರಂತರಲ್ಲಿ-ಪುಟ್ಟಪ್ಪನವರಲ್ಲಿ – ಶರತ್ ಚಂದ್ರರಲ್ಲಿ ಗುರ್ತಿಸಿಕೊಂಡಿದ್ದೇನೆ. ಪ್ರೇಮಚಂದರು ಪ್ರಗತಿಶೀಲ ಚಳುವಳಿಯಲ್ಲಿದ್ದರೂ ತನ್ನ ಬರವಣಿಗೆಯನ್ನ 'ಖಡ್ಗ' ಮಾಡುವ ಆತುರದಲ್ಲಿ ಚಿಲ್ಲರೆ ಲೇಖಕನಾದವನಲ್ಲ. ಹತ್ತು ವರ್ಷಗಳ ಹಿಂದೆ ಓದಿದ ಈ ಮನುಷ್ಯನ ಕಾದಂಬರಿಗಳನ್ನು ಮತ್ತೆ ಓದಬೇಕೆಂಬ ಕುತೂಹಲ ಈಗಲೂ ಇದೆ. ಒಬ್ಬ ಮಹಾನ್ ಸಾಹಿತಿ ಎಲ್ಲ ಕಾಲದಲ್ಲೂ ಹತ್ತಿರವಾಗುವುದು ಈ ಕಾರಣದಿಂದಲೇ. ಆದ್ದರಿಂದ ಇವರ ನಿರ್ಮಲಾ, ಗಭನ್ ಮತ್ತು ಸೇವಾಸದನ್ ಕಾದಂಬರಿಗಳನ್ನು ಹೇಗೆ ಮರೆಯಲು ಸಾಧ್ಯ ?

ಆಗಸ್ಟ್ ತಿಂಗಳಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನವರು ದಿ|| ಪ್ರೇಮಚಂದರ ಜನ್ಮ ಶತಾಬ್ದಿಯನ್ನು ಆಚರಿಸಿದರು. ಇವರು ಆಚರಿಸುವುದು ಮುಖ್ಯ. ಹೇಗೆ ಆಚರಿಸಬೇಕೆಂಬುದು ಇವರಿಗೆ ಮುಖ್ಯವಲ್ಲ. ಯಾಕೆಂದರೆ ಸುಲಭವಾಗಿ ಗ್ರ್ಯಾಂಟ್ಸ್ ಸಿಕ್ಕುತ್ತೆ. ಅವರಪ್ಪನ ದುಡ್ಡಂತೂ ಅಲ್ಲ. ಆದ್ದರಿಂದ ಮೈಕೈ ನೋವಿಲ್ಲದೆ ತಮ್ಮ

ವಕ್ರ ನಗುವಿನ ಮೂಲಕ ಎಲ್ಲವೂ ಸುಸೂತ್ರವಾಗಿ ನಡೆದು ಹೋಗುತ್ತೆ ಎಂದು ತಿಳಿದಿರುತ್ತಾರೆ.

ನಾನು ಉದ್ಘಾಟನೆಯ ಸಮಯಕ್ಕೆ ಸರಿಯಾಗಿ ಹೋಗಲಿಲ್ಲ. ಹೆಚ್. ಎನ್. ತಮ್ಮ ಮಾತನ್ನು ಮುಗಿಸಿದ್ದರು, ಅಮೃತರಾಯ್ ಎದ್ದರು. ಇವರು ಪ್ರೇಮಚಂದರ ಮಗ. ಹಿಂದೀ ಸಾಹಿತ್ಯದಲ್ಲಿ ಇಂದಿನ ಬಹುಮುಖ್ಯ ಲೇಖಕರಲ್ಲೊಬ್ಬರು. ಇವರು ಪ್ರೇಮಚಂದರ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಪ್ರಬಂಧ ಮಂಡಿಸಿದರು. ಆಗ ನನಗೆ ಮೆಚ್ಚಿಗೆಯಾಗಿ ಇವರೇನಾ ಅಮೃತರಾಯ್ ಅಂದೆ - ನನ್ನ ಪಕ್ಕದಲ್ಲಿ ಕೂತಿದ್ದ ವಿಜಯಾ ಸಾಸನೂರರನ್ನು ಕುರಿತು. "ಹೌದು" ಎಂದರು ಸಾಸನೂರರು. ಅಮೃತರಾಯ್‌ರವರ ಭಾಷಣ ಮುಗಿಸಿಕೊಂಡು ಹೊರಗೆ ಬಂದೆವು—ನಾನು ಮತ್ತು ಪುರುಷೋತ್ತಮ. ಆಗ ಹಂಪನಾ ಅಧ್ಯಕ್ಷ ಭಾಷಣ ಮಾಡಲು ಎದ್ದಿದ್ದರು. ಕಾರ್ಯಕ್ರಮ ಮುಗಿದ ನಂತರ ಹೊರಗೆ ಕಲ್ಲೆ ಶಿವೋತ್ತಮರಾಯರು "ಏನೂ ಹಂಪನಾರವರ ಭಾಷಣವನ್ನು ಕೇಳದೆ ಹೊರಗೆ ಬಂದಿರಿ ?" ಎಂದು ನಮ್ಮ ಮಾಮೂಲ ರಾಗವನ್ನು ಎಳೆದರು. ನಾನು ನಕ್ಕು ಸುಮ್ಮನಾದೆ. ಆದರೆ 'ಪಿ.ಯು.ಸಿ.'ಯಲ್ಲಿ ಹಂಪನಾರವರ ಪಾಠವನ್ನು ಕೇಳಲಾಗದೆ ಡೆಸ್ಕ್ ಕೆಳಗೆ ತೂರಿ ಹೊರಗೆ ಬಂದು ಕೃಷ್ಣಯ್ಯನವರ ಕ್ಲಾಸಿಗೆ ಹೋಗುತ್ತಿದ್ದೆವು—ಎಂದು ಅನ್ನೋಣವೆಂದುಕೊಂಡೆ.

ಪ್ರೇಮಚಂದರ ಬಗ್ಗೆ ಇದ್ದ ನಾಲ್ಕೈದು ಗೋಷ್ಠಿಗಳಲ್ಲಿ ಯಾರ ಪ್ರಬಂಧವೂ ಚೆನ್ನಾಗಿರಲಿಲ್ಲ. ಒಂದು ಗೋಷ್ಠಿಗೆ ಬಸವರಾಜ ಕಟ್ಟೀಮನಿಯವರು ಅಧ್ಯಕ್ಷತೆ ವಹಿಸಿದ್ದರು. ಮತ್ತು ಪ್ರಬಂಧವನ್ನು ಮಂಡಿಸಬೇಕಾಗಿತ್ತು. ಆದರೆ ಇವರು ನಿದ್ದೆಗೆಟ್ಟು ಧಾರವಾಡದಿಂದ ಬಂದಿದ್ದರಂತೆ. ಸಭಿಕರಿದ್ದುದು ಇಪ್ಪತ್ತೈದು ಮಂದಿ. ಇದನ್ನು ನೋಡಿ ಕಟ್ಟೀಮನಿಯವರಿಗೆ ಸ್ಫೂರ್ತಿ ಹರಿಯಲಿಲ್ಲ. ಆದರಲ್ಲೂ ನಿದ್ದೆಗೆಟ್ಟು ಬಂದರೆ ಯಾರ ತಲೆ ತಾನೇ ಸರಿಯಾಗಿ ಓಡುತ್ತೆ ? ಆದ್ದರಿಂದ ವಿಷಯಕ್ಕೆ ಬರದೇ - ಬೆಳಗ್ಗಿನ ಕಾರ್ಯಕ್ರಮಕ್ಕೆ ಆಕಾಶವಾಣಿಯವರು ಬಂದಿದ್ದರು; ವಾರ್ತಾ ವಿಭಾಗದವರು ನ್ಯೂಸ್‌ರೀಲನ್ನು ತೆಗೆದುಕೊಂಡು ಹೋದರು—ಈಗ ಯಾರೂ ಇಲ್ಲ. ಇದನ್ನೆಲ್ಲ ಪ್ರತಿಭಟಿಸಬೇಕು ಎಂದರು. ನಂತರ ನೋಡಿ ಬೆಳಗ್ಗೆ ಅಮೃತರಾಯ್‌ರವರ ಮಾತಿಗೆ ನಾವಿದ್ದೆವು. ಈಗ ಅವರ್‍ಯಾಕೆ ಬಂದಿಲ್ಲ ? ನಮ್ಮ ಧಾರವಾಡದಲ್ಲಾದರೆ ಇನ್ನೂರು – ಮುನ್ನೂರು ಜನಾನಾದರೂ ಸೇರ್‍ತಾರೆ. ಇಲ್ಲಿ ಕರ್ನಾಟಕದ ರಾಜಧಾನಿ ಬೆಂಗಳೂರಿನಲ್ಲಿ ಒಂದು ಗೊಣಗಿದರು. - ಹಾಗೆಯೇ ಪ್ರೇಮಚಂದರ ವಿಷಯಕ್ಕೆ ಬಂದು : ಆ ಮನುಷ್ಯನೇನು ದೊಡ್ಡ ಸಾಹಿತಿಯಲ್ಲ. ಚಿಲ್ಲರೆ ಸಾಹಿತಿ. ನಾವು ಪ್ರೇಮಚಂದರಿಗೆ ಜನ್ಮ ಶತಾಬ್ದಿ ಮಾಡುವ ರೀತಿಯಲ್ಲಿ ಅವರು (ಹಿಂದಿಯವರು) ನಮ್ಮ ಅ.ನ.ಕೃಗೆ ಮತ್ತು ಆಲೂರು ವೆಂಕಟರಾಯರಿಗೆ ಯಾಕೆ ಮಾಡಬಾರದು ? ಅಂದಾಗ ನನಗೆ ನಗು ಮತ್ತು

ಸಿಟ್ಟು ಬಂದಿತ್ತು. ಈ ಮನುಷ್ಯ ಬರೀ ನಿದ್ದೆಗೆಟ್ಟಿಲ್ಲ. ತಲೆಯನ್ನು ಕೆಡಿಸಿಕೊಂಡಿದ್ದಾರೆ ಅನ್ನಿಸಿತು. ಒಟ್ಟಿನಲ್ಲಿ ಇಂಥ ಸ್ವಾರಸ್ಯಗಳಿಗೆ ಕೊರತೆ ಇರಲಿಲ್ಲ. ಸಿದ್ಧಲಿಂಗ ಪಟ್ಟಣ ಶೆಟ್ಟಿಯನ್ನು ಬಿಟ್ಟರೆ - ಹೌದಪ್ಪಗಳನ್ನೇ ಕರೆಸಿದ್ದರು.

ಒಟ್ಟು ಎರಡು ದಿನಗಳ ಕಾರ್ಯಕ್ರಮಕ್ಕೆ ಕಳೆಯನ್ನು ತಂದುಕೊಟ್ಟವರು, ಅಮೃತರಾಯ್ ಮತ್ತು ಸೂತ್ರಧಾರ ನಾಟಕ ತಂಡದವರು. ಅಮೃತರಾಯ್‌ರವರ ಅರ್ಥಪೂರ್ಣವಾದ ಪ್ರಬಂಧವನ್ನು ಕೇಳಿದ ಮೇಲೆ ಅವರನ್ನು ಭೇಟಿಮಾಡಬೇಕೆನ್ನಿಸಿತು. ಅವರು ಇಳಿದುಕೊಂಡಿದ್ದ ಹೋಟೆಲ್‌ನಲ್ಲಿ ಕಾಫಿ ಕುಡಿದು ಹೊರಗೆ ಬಂದಾಗ ರಾಯ್ ಅಂಗಡಿಯಲ್ಲಿ ಅಡಿಕೆ ಕಟ್ಟಿಸಿಕೊಳ್ಳುತ್ತಿದ್ದರು. ಹೋಗಿ ಕೇಳಿದೆ—ನಿಮ್ಮೊಡನೆ ಅರ್ಧ ಗಂಟೆ ಚರ್ಚಿಸಬೇಕಾಗಿದೆಯೆಂದು. ಒಪ್ಪಿ ಮಾರನೆಯ ದಿನ ಬೆಳಗ್ಗೆ ಎಂಟುಗಂಟೆಗೆ ನೋಡಲು ಹೇಳಿದರು. ಅದರಂತೆ ಬೆಳಗ್ಗೆ ಹೋದಾಗ ಒಂದಷ್ಟು ಹಿಂದಿಯ ಮಂದಿ ಚರ್ಚಿಸುತ್ತಿದ್ದರು. ಅವರ ಕೈಯಲ್ಲಿ 'ಕಮ್ಯುನಿಸ್ಟ್' ಎಂಬ ಪತ್ರಿಕೆ ಇತ್ತು. ಅದರಲ್ಲಿ ಅಮೃತರಾಯ್‌ರನ್ನು ಕುರಿತು ಬರೆದ ಲೇಖನವನ್ನು ಚರ್ಚಿಸುತ್ತಿದ್ದರೆಂದು ಕಾಣುತ್ತೆ. ನಾನು ಮತ್ತು ಪುರುಷೋತ್ತಮ ಸುಮ್ಮನೆ ಕೂತಿದ್ದೆವು. ಅವರದು ಮುಗಿದ ತಕ್ಷಣ ಒಬ್ಬರನ್ನೊಬ್ಬರು ಆಲಂಗಿಸಿಕೊಂಡು ಬೀಳ್ಕೊಟ್ಟರು.

ಅಮೃತರಾಯ್‌ರವರು ಪ್ರೇಮಚಂದರಂತೆ ಕಾಣುತ್ತಾರೆ. ಸಾಕಷ್ಟು ಎತ್ತರ ವಿದ್ದಾರೆ. ಕೂದಲು ಬೆಳ್ಳಗಾಗಿದ್ದರೂ ಡೈ ಹಾಕಿಕೊಂಡು ಯಾವಾಗಲು ಯುವಕರಂತೆ ಕಾಣಬೇಕೆಂಬ ಷೋಕಿ. ಅವರ ಶ್ರೀಮತಿಯವರು ನಾವಿದ್ದಲ್ಲಿಗೆ ಬಂದರು ಆಕೆಯೂ ಲೇಖಕಿ. ಸೆರಗು ಹೊದ್ದುಕೊಂಡಿದ್ದರು. ಆದರೂ ಅವರ ತಲೆಯಲ್ಲಿ ಬಿಳಿಯ ಕೂದಲು ಎದ್ದುಕಾಣುತ್ತಿತ್ತು. ಈಕೆ ಹಿಂದೀ ಲೇಖಕಿ ಸುಭದ್ರಾ ಕುಮಾರಿ ಚೌಹಾನ ರವರ ಮಗಳು. ಅಮೃತರಾಯ್ ಒಟ್ಟು 37 ಕೃತಿಗಳನ್ನು ಬರೆದಿರುವುದು. ಅವುಗಳಲ್ಲಿ ಏಳು ಕಾದಂಬರಿಗಳು, ಹತ್ತು ಕಥಾ ಸಂಕಲನಗಳು ಮತ್ತು ಹತ್ತು ಭಾಷಾಂತರಗಳು.

ನಾವು ಪ್ರಶ್ನೆ ಕೇಳುವ ಮುನ್ನ ರಾಯ್‌ರವರು "ನೀವು ಕಮ್ಯುನಿಸ್ಟರಾ ?" ಎಂದಾಗ "ಇಲ್ಲ, ನಾನು ಸಿ.ಪಿ.ಐ.ಎಮ್. ಸಿಂಪಥೈಸರ್" ಅಂದೆ. (ನನ್ನ ಗೆಳೆಯ ಪುರುಷೋತ್ತಮ ಬಾಯಿಬಿಡಲಿಲ್ಲ.) ಅದಕ್ಕೆ ಅಮೃತರಾಯ್ ನಾನು 1942 ರಿಂದ 1956 ರವರೆವಿಗೆ ಕಮ್ಯುನಿಸ್ಟ್ ಪಕ್ಷದ ಕಾರ್ಡ್‌ಹೋಲ್ಡರ್ ಆಗಿದ್ದೆ. 56ರಲ್ಲಿ ನಡೆದ ರಾಜಕೀಯ ಬೆಳವಣಿಗೆಯಿಂದ ರಾಜಿನಾಮೆ ನೀಡಿದೆ. ಭಾರತದ ಸಂದರ್ಭದಲ್ಲಿ ಕಮ್ಯುನಿಸ್ಟರು ತಮ್ಮ ಪರಿಸರವನ್ನು ಗುರ್ತಿಸಿಕೊಳ್ಳಲಿಲ್ಲ. ಆದ್ದರಿಂದ ಅವರ ಸೋಲು ಎದ್ದು ಕಾಣುತ್ತೆ, ಎಂದರು.

ಮಿಸ್ಟರ್ ರಾಯ್, ಪ್ರೇಮಚಂದರ ಪ್ರಗತಿಪರ ಮನೋಧರ್ಮಕ್ಕೆ ಸಮಾಜ ವಾದಿ ಚಿಂತಕ ಮಾರ್ಕ್ಸ್ ಕಾರಣವೇನು ? ಇಲ್ಲ. ಪ್ರೇಮಚಂದ್ 'ಮಾರ್ಕ್ಸ್'ನನ್ನು

ಓದಿದ್ದರು ಎನ್ನುವುದಕ್ಕೆ ಯಾವ ಪುರಾವೆಯೂ ಇಲ್ಲ. ಮಾರ್ಕ್ಸ್ ಸಹ ಒಬ್ಬ ಶೋಧಕ. ಸೃಷ್ಟಿಕರ್ತನಲ್ಲ. ಪ್ರೇಮಚಂದ್ ಸಾಹಿತಿಯಾಗಿ ಮಾರ್ಕ್ಸ್‌ನಿಗಿಂತ ಮುಂದೆ ಹೋದವರು. ಆತ 'ತಾನು ಒಬ್ಬ ಬೋಲ್ಷೆವಿಕ್ ಆಗಿದ್ದೇನೆ ಎಂದು ಹೇಳಿದಾಗ, ಆತ ಪುಸ್ತಕಗಳಿಂದ ಪ್ರಭಾವಿತನಾಗಿ ಬೋಲ್ಷೆವಿಕ್ ಆದವರಲ್ಲ. ಆದರೆ ಜೀವನದಿಂದ ಬೋಲ್ಷೆವಿಕ್ ಆದವರು.

ಪ್ರೇಮಚಂದ್ ಮತ್ತು ಶರತ್ ಚಂದ್ರರು ಹೆಣ್ಣನ್ನು ಕುರಿತು ಗಂಭೀರವಾಗಿ ಚಿಂತಿಸುವಾಗ ಅವರಿಗಿದ್ದ ಪ್ರೇರಣೆಯೇನು ? ಪ್ರಗತಿಶೀಲತೆಯನ್ನು ಮೂರ್ತವಾದ ಮಾನವೀಯ ಅರ್ಥದಲ್ಲಿ ವ್ಯಾಖ್ಯಾನ ಮಾಡುವಾಗ ಪ್ರೇಮಚಂದರಿಗೂ ಮತ್ತು ಶರತ್‌ಚಂದರಿಗೂ ಸ್ತ್ರೀಯರ ಆಂತರಿಕ ಸಮಸ್ಯೆಗಳ ಪ್ರಜ್ಞೆ ಇತ್ತು. ಆದರೆ ಶರತ್‌ ಮೂಲಭೂತ ಪ್ರಶ್ನೆಗಳನ್ನು ಕೇಳಿಕೊಳ್ಳಲಿಲ್ಲ. ತುಂಬ ವ್ಯಸನದಿಂದ ಬರೆದರೂ ಸಾಂಪ್ರದಾಯಿಕ ಮೌಲ್ಯಗಳನ್ನು ಮುರಿಯದೆ ಬರವಣಿಗೆಯನ್ನು ನಡೆಸಿದರು. ಆದರೆ ಪ್ರೇಮಚಂದ್ ಇನ್ನು ಆಳಕ್ಕೆ ಹೋಗಿ ಸಮಸ್ಯೆಯನ್ನು ಶೋಧಿಸಬಲ್ಲವರಾಗಿದ್ದರು.

ಮಿ|| ರಾಯ್ ಬೆಳಗ್ಗಿನ ನಿಮ್ಮ ಪ್ರಬಂಧದಲ್ಲಿ ಪ್ರೇಮಚಂದ್‌ರವರು ಗೋಖಲೆ ಯವರ ಕಾರ್ಯವಿಧಾನವನ್ನು ಮೆಚ್ಚಲಿಲ್ಲ ಎಂದಿರಿ—ವಿವರಿಸುವಿರಾ ? ಗೋಖಲೆ ಯವರಿಗೆ ಗಾಂಧೀಜಿಯಷ್ಟು ಕ್ರಿಯಾಶೀಲತೆ ಇರಲಿಲ್ಲ. ಮತ್ತು ಗಾಂಧೀಜಿಯಷ್ಟು ರ್‍ಯಾಡಿಕಲ್ ಆಗಿರಲಿಲ್ಲ. ಆದರೆ ಪ್ರೇಮಚಂದ್ ಗಾಂಧೀಜಿಯನ್ನ ಒಂದು ಕಾರ್ಯ ವಿಧಾನದ ನಿಯಮಕರೆಂದು ಎಂದೂ ಒಪ್ಪಿರಲಿಲ್ಲ. ಅವರು ಗಾಂಧಿಯವರ ಅಹಿಂಸೆಯನ್ನು ಹೋರಾಟದ ಹೆದರಿಕೆಯೆಂದು ಭಾವಿಸಿದ್ದರು. ಇದಕ್ಕೆ ಚೌರಿಚೌರ, ಶೋಲಾಪುರ್ (1940) ಘಟನೆಗಳು ಸಾಕ್ಷಿ. ಗಾಂಧೀ ಜನ ಚಳುವಳಿ ಬೆಳೆದಂತೆ ಅದರ ಬಗ್ಗ ಸಂಕೋಚದಿಂದ ವರ್ತಿಸುತ್ತಿದ್ದರು. ಮತ್ತು ಹೋರಾಟದಿಂದ ಹಿಂದೆ ಸರಿಯುತ್ತಿದ್ದರು. ಕರನಿರಾಕರಣೆಯ ಚಳುವಳಿ ಬದಲಾಗಿ ಉಪ್ಪಿನ ಸತ್ಯಾಗ್ರಹದಂತಹ ಸಾಂಕೇತಿಕ ಚಳುವಳಿಯ ಸಲಹೆ ಮಾಡುತ್ತಿದ್ದರು. ಹಾಗೆಯೇ ವಸಾಹತುಶಾಹಿ ಯುದ್ಧದ ಅವಧಿ ಯಲ್ಲಿ ಸಹ ಆದ ಜನಚಳುವಳಿಯ ಉಗ್ರ ಹೋರಾಟದ ಬಗ್ಗೆ ಭೀತರಾಗಿದ್ದರು. ಮತ್ತು ವೈಯಕ್ತಿಕ ಸತ್ಯಾಗ್ರಹದ ಮೂಲಕ ಒಟ್ಟು ಚಳುವಳಿಯ ಚಾಲನೆಯನ್ನು ಕಡಿಯುತ್ತಿದ್ದರು. ಪ್ರೇಮಚಂದ್ ಕೆಲವು ಭಿನ್ನಮತಗಳ ನಡುವೆ ಕೂಡ ಗಾಂಧಿಯನ್ನು ಪ್ರಗತಿಪರ ಜನನಾಯಕನೆಂದು ಒಪ್ಪಿಕೊಂಡಿದ್ದರು. ಈ ಭಿನ್ನ ದೃಷ್ಟಿಕೋನಗಳು ಆತನ ನಂತರದ ಬರವಣಿಗೆಗಳಲ್ಲಿ ಕಂಡುಬಂದವು.

ಪ್ರೇಮಚಂದರನ್ನು ಅವರ ಕಾಲದ ಜನ ಹೇಗೆ ಸ್ವೀಕರಿಸಿದರು ? ಅವರ ಕಾಲದ ಓದುಗರು ಪ್ರೇಮಚಂದರನ್ನು ಅತಿಮುಖ್ಯ ಕಥಾ ಲೇಖಕ ಎಂದು ಗುರುತಿಸಿದರು.

'ಉಪನ್ಯಾಸ ಸಾಮ್ರಾಟ್' ಎಂದು ಕರೆದರು. ಆದರೆ ಅವರ ಸಮಕಾಲೀನ ಬರಹಗಾರರು—ಆತನನ್ನು ದ್ವೇಷದ ಬರಹಗಾರನೆಂದು ಕರೆಯುತೊಡಗಿದರು.

ಪ್ರೇಮಚಂದ್‌ಗೆ ಮುನ್ನಿನ ಹಿಂದೀ ಸಾಹಿತ್ಯ ಪ್ರಪಂಚ ಹೇಗಿತ್ತು? ತೀರ ಬಡವಾಗಿತ್ತು. ಕೆಲವು ಸಣ್ಣ ಕತೆಗಳು ಮತ್ತು ಒಂದೆರಡು ಸಾಮಾಜಿಕ ಕಾದಂಬರಿಗಳು ಗಮನಿಸುವಂತಿದ್ದವು. ಹಾಗೆಯೇ ದೇವಕಿನಂದನ ಖತ್ರಿ ಮತ್ತು ಕಿಶೋರಿ ಗೋಸ್ವಾಮಿಯವರನ್ನು ಲೆಕ್ಕಕ್ಕೆ ತೆಗೆದುಕೊಳ್ಳಬಹುದು. ಅಮೃತರಾಯ್, ನೀವು ಪ್ರೇಮಚಂದರವರ ಮಗನಾಗಿ ಅವರ ಖಾಸಗಿ ಬದುಕನ್ನು ವಿವರಿಸಬಲ್ಲಿರಾ? ಪ್ರೇಮಚಂದ್‌ರು ಬರೆದ ಆತ್ಮಕಥಾ ಪ್ರಬಂಧವೊಂದರಲ್ಲಿ ಆತ ತನ್ನ ಬದುಕು ಏರುತಗ್ಗುಗಳಿಲ್ಲದ ಸಮತಟ್ಟು ಎಂದು ಹೇಳುತ್ತಾರೆ. ಆತ ತೀರಾ ಸರಳ ವ್ಯಕ್ತಿಯಾಗಿದ್ದ. ಅಭ್ಯಾಸ, ವೇಷ, ಸಂಬಂಧ ನಿಲುವು ಎಲ್ಲದರಲ್ಲೂ. ಸುಲಭವಾಗಿ ಸಮೀಕರಿಸಬಲ್ಲಂತಹವರು. ಹಾಸ್ಯ ಪ್ರಜ್ಞೆಯುಳ್ಳ ಚೈತನ್ಯಶೀಲ, ಕೃತಕತೆ ಮತ್ತು ಕಾಂಪ್ಲೆಕ್ಸ್‌ಗಳಿಲ್ಲದ ಜಿಂಭವಿಲ್ಲದ ವ್ಯಕ್ತಿ. ಆತ ವಾತ್ಸಲ್ಯಮಯೀ ತಂದೆಯಾಗಿದ್ದ. ನನ್ನ ಅವರ ನಡುವೆ ಒಂದೇ ಒಂದು ಕಿರಿಕಿರಿಯ ಪ್ರಸಂಗದ ನೆನಪಿಲ್ಲ. ಅಸಾಧಾರಣ ಏಕಾಗ್ರತೆಯನ್ನು ಹೊಂದಿದ್ದವರು. ಸಣ್ಣ ಮನೆ. ಆರಾಮ ಅಧ್ಯಯನಕ್ಕೆ ಪ್ರತ್ಯೇಕ ಕೋಣೆ ಇರಲಿಲ್ಲ. ಫೌಂಟನ್ ಪೆನ್‌ಗಳ ಬಗ್ಗೆ ಆತನಿಗೆ ಅಪನಂಬಿಕೆ. ಆದ್ದರಿಂದಲೇ ಪೇನಾಕಡ್ಡಿ ಮತ್ತು ಮಸಿ ಕುಡಿಕೆ ಎಂದರೆ ತುಂಬ ವಿಶ್ವಾಸ. ನಮ್ಮ ತಾಯಿ ದೃಢ ಹೆಂಗಸಾಗಿದ್ದಳು—ಅಂದಾಗ ಪ್ರೇಮಚಂದರು ಬೇರೆ ಹೆಂಗಸರನ್ನು ಪ್ರೀತಿಸಿರಲಿಲ್ಲವಾ? ಎಂದೆ ಶರತ್‌ಚಂದ್ರ ಹೋದಕಡೆಯಲ್ಲೆಲ್ಲ ಹೆಂಗಸರಿಗೆ ಗಂಟು ಬೀಳುತ್ತಿದ್ದರು. ಆದ್ದರಿಂದಲೇ ಹೆಣ್ಣಿನ ಸಮಸ್ಯೆಯ ವಿವಿಧ ಮುಖಗಳನ್ನು ಚಿತ್ರಿಸಲು ಸಾಧ್ಯವಾಯಿತೇನೋ ಅನ್ನಿಸುತ್ತೆ—ಈ ರೀತಿಯ ಸಂಬಂಧಗಳು ಪ್ರೇಮಚಂದರಿಗೆ ಇತ್ತೆ? ನಗುತ್ತ ಇರಲಿಲ್ಲ ಅಂದರು. ಅದಕ್ಕೆ ನಾನು ನೀವು ಮಗನಾಗಿ ಹೇಳುತ್ತಿದ್ದೀರಿ' ಅಂದೆ. ರಾಯ್ ಮುಂದುವರೆದು ನಾನು ಆತನ ಜೀವನ ಕತೆ ಬರೆಯುವಾಗ ಇಂತಹ ಯಾವುದೇ ಪ್ರಕರಣವಿದೆಯೇ ಎಂದು ಬಹಳ ಹುಡುಕಾಡಿದೆ. ನಿರಾಶೆಯಾಯಿತು, ಈ ದೃಷ್ಟಿಯಿಂದ ಪ್ರೇಮಚಂದ್ ಶರತ್ ಬಾಬುಗಿಂತ ಭಿನ್ನವಾದ ವ್ಯಕ್ತಿ. ಶತತ್‌ರವರದ್ದು ಅಲೆಮಾರಿ ಬದುಕು. ಆತನಿಗೆ ಅನೇಕ ಬಗೆಯ ಹೆಂಗಸರ ಪರಿಚಯ ಮತ್ತು ಸ್ನೇಹವಿತ್ತು. ಇಷ್ಟಾದರೂ ಮಹಿಳೆಯರನ್ನು ಪ್ರೇಮಚಂದ್ ಅರ್ಥಮಾಡಿಕೊಂಡಷ್ಟು ಶರತ್ ಅರ್ಥಮಾಡಿಕೊಳ್ಳಲಿಲ್ಲ. ಶರತ್‌ರ ಜೀವನ ಹಳ್ಳಗುಡ್ಡಗಳಿಂದ ಕೂಡಿದ್ದು. ಪ್ರೇಮಚಂದ್ ಸಮತಲ ಜೀವನ ನಡೆಸಿದವರು. ಜ್ಞಾನಪೀಠ ಪ್ರಶಸ್ತಿ ವಿಜೇತ 'ಅಜ್ಞೇಯ'ರ ಬಗ್ಗೆ ನಿಮ್ಮ ನಿಲುವೇನು? 'ಅಜ್ಞೇಯ' ಒಬ್ಬ ವ್ಯಕ್ತಿತ್ವವಾದಿ. ಸಾಹಿತ್ಯವನ್ನು ಪರಿಶುದ್ಧ ಪ್ರಯೋಗ ಎಂದು ಭಾವಿಸುವಾತ. ಮನಸ್ಸಿನ ಮತ್ತು ಭಾವನೆಗಳ ಶ್ರೀಮಂತಿಕೆಯು ಕೆಳಗಿಳಿಯಬಾರದು ಎಂದು ತಿಳಿದಿರು

ವಂತವರು. 40–47ರಲ್ಲಿ ಆತ 'ಪ್ರತೀಕ' ಎಂಬ ಸಾಹಿತ್ಯ ಪತ್ರಿಕೆಯನ್ನು ನಡೆಸುತ್ತಿದ್ದರು. ನಾನು 'ಹಂಸ' ನಡೆಸುತ್ತಿದ್ದೆ. ಪರಸ್ಪರ ಬೇಕಾದಷ್ಟು ಬರೆದುಕೊಂಡಿದ್ದೆವು. ನಾವಿಬ್ಬರೂ ಬೇರೆಬೇರೆ ಶೈಲಿಯ ಬರಹಗಾರರು. ಸಂಸ್ಕೃತ ಬೆರೆತ ಶಿಷ್ಟಶೈಲಿಯ ಅವರ ಬರಹವನ್ನು ನಾನು ಮೆಚ್ಚಿಕೊಳ್ಳಬಲ್ಲೆ, ಹಳ್ಳಿಗಾಡಿನ ನನ್ನ ಭಾಷೆಯನ್ನು 'ಅಜ್ಞೇಯ' ಮೆಚ್ಚಿದ್ದಾರೆ. ಆತ ಪ್ರತಿಭಾವಂತರನ್ನು ಗುರ್ತಿಸುವ ಮನೋಧರ್ಮದವನು.

ದಿ॥ ಫಣೀಂದ್ರನಾಥ ರೇಣುರವರ ಬಗ್ಗೆ ಒಂದೆರಡು ಮಾತು ಹೇಳುವಿರಾ ?
ರೇಣು ಸಂವೇದನಾಶೀಲನಾದ ಬರಹಗಾರ. ಆತನ ಕೃತಿಗಳನ್ನು ನಾನೂ ಸಹ ಇಷ್ಟಪಟ್ಟಿದ್ದೇನೆ. ಆದರೆ ಸಾಮಾನ್ಯವಾಗಿ ರೇಣುರವರಿಗೆ ಒಂದು ತಪ್ಪುಗೌರವ ಸಲ್ಲಲ್ಪಡುತ್ತದೆ. 'ಆಂಚಲಿಕತಾ' (ಪ್ರಾದೇಶಿಕತೆಯ) ಸಾಹಿತ್ಯದ ಮೊದಲ ಬರಹಗಾರ ಆತ ಎನ್ನುವುದು ತಪ್ಪು. ನಿಜವಾಗಿ ಪ್ರಾದೇಶಿಕ ಭಾಷೆಯಲ್ಲಿ ಪೂರ್ಣರೂಪದ ಕಾದಂಬರಿಗಳನ್ನು ಬರೆದವರು ಬೃಂದಾವನಲಾಲ್ ವರ್ಮ. ಫಣೀಂದ್ರನಾಥಜೀ ಪುಸ್ತಕಗಳು ಆದರ್ಶಗಳನ್ನು ಹೇಳಲು ತೊಡಗುತ್ತವೆ— ಶರತ್‌ಚಂದ್ರರಂತೆ. ಆದರೆ ನಾನು ಬೇರೆಯ ಮಾರ್ಗಕ್ಕೆ ಸೇರಿದವನು. ಹಾಗೆಯೇ ಇವತ್ತಿನ ಹಿಂದೀ ಸಾಹಿತ್ಯದಲ್ಲಿ ಹೊಸಬರಲ್ಲಿ ಮಂಜುಭಾರ್ಗವಿ ಮತ್ತು ಮಾಲತಿ ಜೋಶಿ— ಇವರು ನಿಜವಾಗಿಯೂ ಒಳ್ಳೆಯ ಕೃತಿ ಕೊಡುವವರು. ನಮ್ಮ ಜೊತೆಯಲ್ಲಿ ಕೂತಿದ್ದ ಪಟ್ಟಾದ್ರಿಯವರು 'ಕೃಷ್ಣಾಸೂರ್ತಿ' ಎಂದಾಗ – ಕೃಷ್ಣಾಸೂರ್ತಿ ನನಗಿಷ್ಟವಾಗುವುದಿಲ್ಲ. ಕ್ಷುಲ್ಲಕ ಗಿಮಿಕ್ಸ್ ಮತ್ತು ಕಾಮದ ಮಾರಾಟ ನನಗಿಷ್ಟವಾಗೋದಿಲ್ಲ. ಒಬ್ಬ ಹೆಂಗಸು ಇದನ್ನು ಮಾಡುತ್ತಿದ್ದಾಳೆ ಅನ್ನೋದರಿಂದ ನಮಗೆ ಸಾಹಿತ್ಯ ಇಷ್ಟವಾಗುವ ಅನಿವಾರ್ಯವಿಲ್ಲ. ನಂತರ ರಘುವೀರ ಸಹಾಯ್ ಮತ್ತು ಸಕ್ಸೇನ ಸಹ ಒಳ್ಳೆಯ ಕೆಲಸ ಮಾಡುತ್ತಿದ್ದಾರೆ. ನೀವು ಎಮರ್ಜನ್ಸಿಯಂತಹ ಘಟನೆಗಳಿಗೆ ಹ್ಯಾಗೆ ಪ್ರತಿಕ್ರಿಯಿಸುತ್ತೀರಿ ? ಎಮರ್ಜನ್ಸಿ ಒಂದು ಕೆಟ್ಟ ಘಟನೆ. ಮನುಷ್ಯನ ಎಲ್ಲಾ ಸ್ವಾತಂತ್ರ್ಯಗಳನ್ನು ನುಂಗುವಂಥದ್ದು. ಆದರೆ ಎಲ್ಲೋ ಈ ದೇಶಕ್ಕೆ ಕಠಿಣವಾದ ಆಳ್ವಿಕೆ ಬೇಕು ಅನಿಸ್ತದೆ. ಒಬ್ಬ ಪರೋಪಕಾರಿ ಸರ್ವಾಧಿಕಾರಿ ಬೇಕೇನೋ. ನೆಹರು ಒಬ್ಬ ಅರ್ಧ ಮಾಗಿದ ಸಮಾಜವಾದಿ, ಅರ್ಧ ಬೆಂದ ಚರಿತ್ರೆಕಾರ. ಇಲ್ಲದಿದ್ದರೆ ಆತ ನಿಜವಾಗಿ ನಮಗೆ ಬೇಕಾದಂತ ನಾಯಕ– ಆಗ್ತಿದ್ದರು. 75ರಿಂದ 77ರ ತನಕ ಇದ್ದ ಎಮರ್ಜನ್ಸಿ ಒಂದು ಮಾಲಾಫೈಡ್ ಎಮರ್ಜೆನ್ಸಿ ಈ ದೇಶಕ್ಕೆ ಬೋನಾಫೈಡ್ ಎಮರ್ಜನ್ಸಿ ಬೇಕೇನೊ.

ಅಮೃತರಾಯ್‌ರವರೇ ಒಬ್ಬ ಸಾಂಸ್ಕೃತಿಕ ವ್ಯಕ್ತಿಯಾಗಿ ಅಸ್ಸಾಂ ಚಳುವಳಿಯನ್ನು ನೀವು ಸಮರ್ಥಿಸುತ್ತೀರಾ ?

ಅಸ್ಸಾಂ ನ್ಯಾಯವಾದ ಚಳುವಳಿ. ಕೇಂದ್ರ ಇದನ್ನು ಅರ್ಥಮಾಡಿಕೊಂಡಿಲ್ಲ. ಇದು ರಾಷ್ಟ್ರದ ಅಸ್ತಿತ್ವದ ಪ್ರಶ್ನೆ. ಹೊರದೇಶದ ಜನ ಹೆಚ್ಚು ಹೆಚ್ಚು ಆವರಿಸಿದಂತೆ ಅನೇಕ ಸಾಮಾಜಿಕ ಒತ್ತಡಗಳು ಉಂಟಾಗುತ್ತವೆ. ಆದರೆ ಚಳುವಳಿಯ ಪ್ರಶ್ನೆಗಳು ಮಿಶ್ರರೂಪದ್ದು. ಇದರಲ್ಲಿ ನಿರುದ್ಯೋಗ ಮತ್ತು ಬಡತನ ತಳಕು ಹಾಕಿಕೊಂಡಿರುತ್ತದೆ. ಬೆಂಗಾಲಿಯರು ಮೊದಲು ಇಂಗ್ಲೀಷ್ ಭಾಷೆಗೆ ಎಕ್ಸ್‌ಪೋಸ್ ಆದವರು. ಅವರು ಅಸ್ಸಾಂಗೆ ಹೋಗಿ ಎಲ್ಲ ಕೆಲಸಗಳನ್ನು ಕಸಿದರು, ಬಹುಶಃ ಒಂದು ಪ್ರಗತಿಪರ ಚಲನ ಶೀಲ ಸಮಾಜದಲ್ಲಿ ಇಂತಹ ಪ್ರಶ್ನೆಯೇ ಉದ್ಭವಿಸುತ್ತಿರಲಿಲ್ಲ.

ಪ್ರೇಮಚಂದ್ ಜನ್ಮಶತಾಬ್ಧಿಯ ಮತ್ತೊಂದು ಕೊಡುಗೆಯೆಂದರೆ 'ಸೂತ್ರಧಾರ' ನಾಟಕ ತಂಡದವರಿಂದ 'ಕಫನ್' ನಾಟಕ. 'ಕಫನ್' ಪ್ರೇಮಚಂದರ ಒಂದು ಉತ್ತಮ ಕತೆ. ಈ ಕತೆಯನ್ನು ಕೋರಸ್ 77 ತಂಡದ ಶಶಿಧರ್ ಕನ್ನಡಕ್ಕೆ ಚೆನ್ನಾಗಿ ತಂದಿದ್ದರು. ಇದು ಬೆಂಗಾಲಿ ನಾಟಕರಂಗದಲ್ಲಿ ಹೊಸದೊಂದು ಗುಂಪು ಹುಟ್ಟಿಕೊಳ್ಳಲು ಕಾರಣವಾದ ನಾಟಕ. ಕಫನ್ ನಾಟಕ ರೂಪ 'ದಾನಸಾಗರ್' ಅನಾಮಧೇಯನಾಗಿದ್ದ ಲೇಖಕನಿಗೆ ಕೀರ್ತಿಯ ಬಿರುದನ್ನು ತೊಡಿಸಿತು. ನೂರಕ್ಕೂ ಹೆಚ್ಚಿನ ಪ್ರದರ್ಶನಗಳನ್ನು ಕಂಡಿದೆ. ಹತ್ತು ಹನ್ನೆರಡು ವರ್ಷಗಳ ಹಿಂದೆ ನಾನು ಓದಿದ ಈ ಕತೆಯನ್ನು ನಾಟಕ ಅರ್ಥಮಾಡಿಸಿತು. ರಂಗಸಂಪದದಿಂದ ಹೊರಬಂದ ನಾಗೇಶ್ ತನ್ನ ಶ್ರಮದ ಮೂಲಕ 'ಸೂತ್ರಧಾರ'ನಲ್ಲಿ ಬೇರುಬಿಟ್ಟುಕೊಳ್ಳುತ್ತಿದ್ದಾರೆ. ಕನ್ನಡ ರಂಗಭೂಮಿಗೆ ಸಂಬಂಧಿಸಿದಂತೆ ಇದೂ ಒಂದು ಮುಖ್ಯ ತಂಡವಾಗಬಹುದು.

'ಕಫನ್' ಮನುಷ್ಯನ ಸಣ್ಣತನಗಳನ್ನು ಗೇಲಿಮಾಡುವಲ್ಲಿ ಯಶಸ್ವಿಯಾದ ಕತೆ. ನಾಟಕದಲ್ಲಿಯೂ ಅದರ ಹೆಚ್ಚುಗಾರಿಕೆಗೆ ಕೊರತೆಯನ್ನು ತಂದುಕೊಳ್ಳದೆ ಪ್ರದರ್ಶನ ಕಂಡ ನಾಟಕ. ಸಾಹಿತ್ಯಪರಿಷತ್ತಿನ ಪುಟ್ಟ ವೇದಿಕೆಯ ಮ್ಯೇಲೆ ಸಾಕಷ್ಟು ಪರಿಕರಗಳಿಲ್ಲದಿದ್ದರೂ ಪ್ರೇಕ್ಷಕರನ್ನು ಗಂಭೀರವಾಗಿ ಕೂರಿಸಿದ ನಾಟಕ. (ಇದರಲ್ಲಿ ಕಾಲು ಭಾಗ ಪ್ರೇಕ್ಷಕರು ಬಸವರಾಜ ಕಟ್ಟೀಮನಿಯವರ ಭಾಷಣಕ್ಕಿದ್ದಿದ್ದರೆ ಕಟ್ಟೀಮನಿಯವರು ಖುಷಿಯಿಂದ ನಿದ್ದೆಗೆಟ್ಟಿದ್ದಕ್ಕೆ ಸಾರ್ಥಕವೆಂದುಕೊಳ್ಳುತ್ತಿದ್ದರು.)

ನಮ್ಮ ಬದುಕಿನ ಗತಿಸ್ಥಿತಿಯಲ್ಲಿ ದುಡ್ಡಿನ ಪಾತ್ರ ಹೆಚ್ಚಿನದು. ನಮ್ಮೆಲ್ಲ ಸಣ್ಣತನಗಳು ಮತ್ತು ದೊಡ್ಡಸ್ತಿಕೆಯೂ ಇದರ ಸುತ್ತಲೂ ಸುತ್ತುವರಿಯುವಲ್ಲಿ ಘಟಿಸುವ ಕ್ರಿಯೆಗಳು ಸೂಕ್ಷ್ಮವಾದವು. ಅವು ವರ್ಗದ ದೃಷ್ಟಿಯಿಂದ ಬೇರೆಬೇರೆ ರೂಪದಲ್ಲಿ ಕಾಣಬಹುದು. ಈ ದೃಷ್ಟಿಯಿಂದ 'ಕಫನ್' ನಾಟಕದ ಈಶ ಮತ್ತು ಅವನ ಮಗ ಮಾದ ಇವರಿಬ್ಬರ ಸಂಬಂಧಗಳು ಹೆಚ್ಚು ಅರ್ಥಪೂರ್ಣವಾದವು. ಇವರಿಬ್ಬರ ಸಂಭಾಷಣೆಯ ಹಿನ್ನೆಲೆಯಲ್ಲಿ ಗರ್ಭಿಣಿಯಾದ ಮಾದನ ಹೆಂಡತಿಯ ಪ್ರಸವವೇದನೆ ಮಾರ್ಮಿಕವಾದದ್ದು. ಸೂಲಗಿತ್ತಿಯನ್ನು ಕರೆದುತರಲು ಹೋದ ಮಾದ ಗೆಣಸನ್ನು ಕದ್ದು ತರುವುದು—ಆ ಗೆಣಸಿ

ಗಾಗಿ ತಂದೆಮಕ್ಕಳ ಪರದಾಟ. ಅದೇ ಸಮಯಕ್ಕೆ ಬಾಗ ಎಂಬ ಕಳ್ಳ ಇವರಲ್ಲಿಗೆ ಆಶ್ರಯಕ್ಕೆ ಬಂದಾಗ ನಡೆಯುವ ಚೌಕಾಸಿಯನ್ನು ಅರ್ಥಪೂರ್ಣವಾಗಿ ತಂದಿದ್ದಾರೆ. ಕೊನೆಗೆ ಮಾದನ ಹೆಂಡತಿ ಸಾಯುತ್ತಾಳೆ. ಆಗ ಈಶಪ್ಪ ತನ್ನ ಸೊಸೆಯು ಅಂತ್ಯ ಕ್ರಿಯೆಯ ನೆಪದಲ್ಲಿ ದುಡ್ಡನ್ನು ಕಲೆಹಾಕಲು ಯೋಚಿಸುವನು. ಅದೂ ನಡೆಯುತ್ತದೆ. ಕೊನೆಯ ದಮ್ಮಡಿಯವರೆವಿಗೂ ಕುಡಿಯುವಲ್ಲಿ ಅಂತ್ಯಕ್ರಿಯೆಯನ್ನು ಮುಂದೂಡುವ ಕ್ರಮ ಪ್ರೇಕ್ಷಕರ ಮನಸ್ಸಿಗೆ ನಾಟುವಂತದ್ದು. ಇಷ್ಟರ ನಡುವೆಯೂ ಮಾದ ತನ್ನ ಹೆಂಡತಿಯ ಬಗ್ಗೆ ಕಲ್ಪಿಸಿಕೊಳ್ಳುವ ಕಲ್ಪನೆಗಳು–– ಈಶನ ಮಟ್ಟಿಗೆ ದೂರದವಾದರೂ ಮಾದನಿಗೆ ಮತ್ತೆ ಮತ್ತೆ ಕಾಡುವಂತವು. ಬಡತನವು ಮನುಷ್ಯನ ಎಲ್ಲಾ ಆಶಯುಗಳನ್ನು ತುಳಿದಿಡುತ್ತದೆ ನಿಜ. ಆದರೆ ಅದರಿಂದಲೇ ಹುಟ್ಟಿಕೊಳ್ಳುವ ಕೆಲವು ಸಣ್ಣತನಗಳು ಮನುಷ್ಯ ಸಂಬಂಧಗಳಿಂದ ಹೊರತಾದವಲ್ಲ. ಒಟ್ಟಿನಲ್ಲಿ ನಾಟಕದ ಯಶಸ್ಸಿಗೆ ನಿರ್ದೇಶಕರ ಜೊತೆ ಈಶನ ಪಾತ್ರದಲ್ಲಿ ಜೋಷಿ ಮತ್ತು ಮಾದನ ಪಾತ್ರದಲ್ಲಿ ವೆಂಕಟಸ್ವಾಮಿ ಉತ್ತಮ ಅಭಿನಯದ ಮೂಲಕ ಸಹಕರಿಸಿದರು.

# ಒಳನೋಟ

## ಮೂರೂ ಬಿಟ್ಟವರು

31-7-80ರ ಗುರುವಾರ "ಪ್ರಜಾವಾಣಿ"ಯಲ್ಲಿ "ಶಾಸಕರಿಗೆ ಅಧಿಕ ಸೌಲಭ್ಯ" ಎನ್ನುವ ಸುದ್ದಿ ಮುಖ ಪುಟದಲ್ಲೇ ಅಚ್ಚಾಗಿದೆ. ಅದರ ಹಿಂದಿನ ಮಂಗಳವಾರ, ವಿಧಾನ ಸಭೆಯಲ್ಲಿ, ನಮ್ಮ ವಿರೋಧ ಪಕ್ಷದ ಶಾಸಕರು, ಧರಣಿ ಕುಳಿತು, ಸಭೆಯ ಕಲಾಪಗಳಿಗೆ ಅಡ್ಡಿಪಡಿಸಿ, ಧಾರವಾಡ ಜಿಲ್ಲೆಯ ರೈತರ ಚಳುವಳಿಯ ಕಡೆಗೆ, ಸರ್ಕಾರದ ಗಮನವನ್ನು ಸೆಳೆಯುವುದರಲ್ಲಿ ಯಶಸ್ವಿಯಾಗಿದ್ದಾರೆ. ಅದುವರೆಗೂ ಗಮನವಿರಲಿಲ್ಲ ವೆಂದಲ್ಲ. ಗಮನವಿತ್ತು—ಆದರೆ ನ್ಯಾಯ ಕೇಳಿದ ಬಡ ರೈತರಿಗೆ ಗುಂಡಿಕ್ಕುವುದರ ಕಡೆಗೆ ಗಮನವಿತ್ತಷ್ಟೆ. ಈ ಧರಣಿಯ ಫಲವಾಗಿ, ನಮ್ಮ ಗುಂಡೂರಾಯರ ಪಲ್ಲಕ್ಕಿ ಹೊರುವ ಶಾಸಕರು ತುರ್ತು ಸಭೆ ಸೇರಿ, ನರಗುಂದ, ನವಲಗುಂದದ ಗೋಲಿಬಾರುಗಳ ಬಗ್ಗೆ, ರೈತರ ಕಷ್ಟಗಳ ಬಗ್ಗೆ ಚರ್ಚಿಸಿಲ್ಲ. ಆದರೆ ತಮ್ಮದೇ ಸೌಲಭ್ಯಗಳ ಬಗ್ಗೆ ಕೆಲವು ಬೇಡಿಕೆಗಳನ್ನು ಮಂಡಿಸಿದ್ದಾರೆ. ನಮ್ಮ ಹಸನ್ಮುಖಿ ಮುಖ್ಯ ಮಂತ್ರಿಗಳು, ತಕ್ಷಣ, ತುಂಬು ಮನಸ್ಸಿನಿಂದ ಒಪ್ಪಿಕೊಂಡಿದ್ದಾರೆ. ಒಂದು ಕಡೆ ದೇಶ ಹತ್ತಿಕೊಂಡು ಉರಿಯುತ್ತಿದ್ದರೆ—ಈ ಜನ-ದೇಶವನ್ನಾಳುವ ಜನ-ಅದರ ಪರಿವೆಯೇ ಇಲ್ಲದಂತೆ, ತಮ್ಮ ಸೌಲಭ್ಯಗಳನ್ನು ಹೆಚ್ಚಿಸಿ ಕೊಂಡಿದ್ದಾರೆ. ಆ ಸೌಲಭ್ಯಗಳು ಯಾವುವೆಂದರೆ—

1) ಶಾಸಕರಿಗೆ ಊಟ-ತಿಂಡಿಗಳ ಬೆಲೆ ಕಡಿಮೆ ಮಾಡುವುದು (ಇದರಲ್ಲಿ ನಾನ್ ವೆಜಿಟೇರಿಯನ್ ಕೂಡ ಸೇರಿರಬಹುದು).

2) ಶಾಸಕರ ಕೊಠಡಿಗಳ ಬಾಡಿಗೆಯನ್ನು 5ರೂ ನಿಂದ 2 ರೂ.ಗೆ ಇಳಿಸುವುದು.

3) ಪ್ರಯಾಣದ ಭತ್ಯವನ್ನು 0-75 ಪೈಸೆಗಳಿಂದ 1-25 ಕ್ಕೆ ಏರಿಸುವುದು.

4) ಬಿಟ್ಟಿ ಟೆಲಿಫೋನ್ ಕರೆಗಳನ್ನು, ಎರಡರಷ್ಟು ಹೆಚ್ಚಿಸುವುದು ಮತ್ತು

5) ಬಿಟ್ಟಿ ರೈಲು ಪ್ರಯಾಣಕ್ಕೆ ಕೂಪನ್‌ಗಳನ್ನು ಕೊಡಿಸುವುದು.

ಮೇಲ್ಕಂಡ ಬೇಡಿಕೆಗಳು ನ್ಯಾಯವಾಗೇ ಇರಬಹುದು. ಆದರೆ ಅವುಗಳನ್ನು ಈಡೇರಿಸಿಕೊಳ್ಳಲು, ಇವರು ಆರಿಸಿಕೊಂಡ ಸಂದರ್ಭ ಮಾತ್ರ, ಎಂಥವರಿಗೂ ನಾಚಿಕೆ ಬರಿಸುವಂಥಾದ್ದು. ಇವರಿಗೆ ಮಾತ್ರ ನಾಚಿಕೆ ಯಾಗಿಲ್ಲ. ನಾಚಿಕೆ, ಮಾನ ಮತ್ತು ಮರ್ಯಾದೆ-ಇವುಗಳನ್ನು ಇಟ್ಟುಕೊಳ್ಳುವುದು ಬಹಳ ಕಷ್ಟ. ಅದಕ್ಕೆ ಅರ್ಹತೆ ಬೇಕು.

ಇವುಗಳನ್ನು ಬಿಟ್ಟವರಿಗೆ ('ಮೂರೂ ಬಿಟ್ಟವರಿಗೆ ದೊರೆಕೊಳು') ಇನ್ನೆಂತಹ ನಾಚಿಕೆ ? ಇವರು ಎಲ್ಲದಕ್ಕೂ ಅತೀತರು.

—ಗುಬ್ಬಿರೇವಣರಾಧ್ಯ

o—o—o

# ವಕೀಲರು ಮತ್ತು ಸಮಾಜ

ಭಾರತದ ಸ್ವತಂತ್ರ ಸಂಗ್ರಾಮ ಚಳುವಳಿ ಸಮಯದಿಂದಲೂ, ನೋಡಿದರೆ, ಭಾರತದಲ್ಲಿ ವಕೀಲರು ಸಮಾಜದ ಮಾರ್ಗದರ್ಶಕರಾಗಿ ಯೋಗ್ಯ ಕೆಲಸಗಳನ್ನು ನಿರ್ವಹಿಸಿದ್ದಾರೆಂಬುದು ಕಂಡುಬರುತ್ತದೆ. ರಾಷ್ಟ್ರದ ಪ್ರಮುಖ ನೇತಾರರು–ವಕೀಲರ ಬಳಗಕ್ಕೆ ಸೇರಿದವರಾಗಿದ್ದರು. ಗಾಂಧೀ ನೆಹರು, ಪಟೇಲ್ ಇವರುಗಳು ಮೂಲತಃ ವಕೀಲಿ ಉಧ್ಯಮದಿಂದ ಹೊರಟವರೆ, ಈಗ 50 ವರ್ಷಗಳ ಹಿಂದೆಯೂ ಪುಸಕ್ತಗಳನ್ನು ಹಾಗೂ ದಾಖಲೆಗಳನ್ನು ನೋಡಿದರೆ, ವಕೀಲರು ಸಮಾಜದಲ್ಲಿ ಸರ್ವರ, ಗೌರವ, ಮನ್ನಣೆಗಳಿಗೆ ಪಾತ್ರರಾಗಿದ್ದರೆಂಬುದು ಕಂಡು ಬರುತ್ತದೆ.

ಆದರೆ ಇಂದು ಪರಿಸ್ಥಿತಿ ಬದಲಾವಣೆ ಆದ ಹಾಗೆ ಕಾಣುತ್ತದೆ. ವಕೀಲರು ಮುಖತಃ ಸಮಾಜದ ಮಾರ್ಗ ದರ್ಶಕರಾಗಿರುವ ತಮ್ಮ ಸ್ಥಾನವನ್ನು ಬಿಟ್ಟು ಕೊಟ್ಟು, ಕೇವಲ ತಮ್ಮ ತಮ್ಮ ಉಧ್ಯಮದಲ್ಲಿ ತೊಡಗಿಕೊಂಡು, ಸಮಾಜವನ್ನು ಮರೆತಂತೆ ಕಾಣುತ್ತದೆ. ಇದು ತೀವ್ರದುಃಖಕರ ವಿಚಾರ. ಬಡ ಜನರಿಗೆ ಕಾನೂನು ನೆರವನ್ನು ಕೊಡುವಲ್ಲಿ ಹೆಚ್ಚು, ಉತ್ಸಾಹವನ್ನು ತೋರಿಸುತ್ತಿಲ್ಲ. ಇದು ತುಂಬಾ ಶೋಚನೀಯ.

ಬಡ ಜನತೆಯ ಬೆನ್ನೆಲುಬಾಗಿ, ರಾಷ್ಟ್ರದಲ್ಲಿ ಎರಡು ಪದವಿಗಳನ್ನು ಹೊತ್ತು, ಕಾನೂನಿನ ಪರಾಮರ್ಶೆಯನ್ನರಿತು ಕೆಲಸ ಮಾಡಬಲ್ಲ ಹಾಗೂ ಸಮಾಜದ ನಾನಾ ಮುಖದ ಜನರ ಉಳಿವು, ಸೆಳೆವುಗಳನ್ನು ಅರಿತ ಈ ಜನ ಬಡ ಜನತೆಗೆ ಅವರ ಹಕ್ಕು ಭಾದ್ಯತೆಗಳ ಬಗ್ಗೆ ತಿಳುವಳಿಕೆ ನೀಡುವುದು ಅತ್ಯವಶ್ಯಕ. ಎಷ್ಟೋ ವೇಳೆ ಕಾನೂನಿನ ಅರಿವಿಲ್ಲದೆ, ಕಾನೂನು ತಮಗೆ ಕೊಡುವ ರಕ್ಷಣೆ, ಸಹಾಯ, ಸಹಕಾರವನ್ನು ಬಡ

ಜನತೆ ಉಪಯೋಗಿಸಿಕೊಳ್ಳುಲು ಆಗುತ್ತಿಲ್ಲ. ಇದು ಅವರ ಅಜ್ಞಾನ ಕಾರಣದಿಂದಾಗಿ. ಉದಾಹರಣೆಗೆ ಪೋಲಿಸರು ಕೋರ್ಟಿನಿಂದ ಸರ್ಚ್‌ವಾರೆಂಟ್ ಇಲ್ಲದೆ ಯಾವ ಮನೆಯನ್ನೂ ಪ್ರವೇಶಿಸಿ ತನಿಖೆ ಮಾಡಲು ಸಾಧ್ಯವಿಲ್ಲ ಎಂಬ ಅಂಶ ಬೆಂಗಳೂರಿನಲ್ಲಿಯೇ ಎಷ್ಟೋ ಜನರಿಗೆ ಅರಿವಿಲ್ಲ. ಅಲ್ಲದೆ "ನಾನ್‌ಕಾಗ್ನಿ ಸೇಬಲ್ ಕೇಸುಗಳಲ್ಲಿ ಕೋರ್ಟಿನಿಂದ ಅರೆಸ್ಟ್‌ವಾರೆಂಟ್ ಇಲ್ಲದೆ ಯಾರನ್ನೂ ಬಂಧಿಸುವ ಹಕ್ಕು ಪೋಲಿಸರಿಗಿಲ್ಲ ಎಂಬ ಅರಿವು ಎಷ್ಟೋ ಜನರಿಗೆ ಗೊತ್ತಿಲ್ಲ. ನೋಟಿಸ್ ಕೊಡದೆ ಪೋಲಿಸರು ಸ್ಟೇಷನ್ನಿಗೆ ಕರೆದು ಕೊಂಡು ಹೋಗಿ ಹಿಂಸಿಸುತ್ತಿರುವುದು ಅಲ್ಲೇ ಇಟ್ಟುಕೊಳ್ಳುವುದು ಇಂದು ಅನೇಕ ಕಡೆ ಜರಗುತ್ತಿವೆ. ಅರೆಸ್ಟ್ ಮಾಡಿದರೂ ಕೋರ್ಟ್ ಆಜ್ಞೆ ಇಲ್ಲದೆ 24 ಗಂಟೆಗಳಿಗಿಂತ ಜಾಸ್ತಿ ಇಟ್ಟು ಕೊಳ್ಳಲು ಅವಕಾಶವಿಲ್ಲವೆಂಬುದು ಅನೇಕರಿಗೆ ಅರಿವಿಲ್ಲ.

ಈ ವಿಚಾರಗಳನ್ನೆಲ್ಲಾ ಜನತೆಗೆ ಅದರಲ್ಲೂ ಬಡ ಜನತೆಗೆ ವಕೀಲರುಗಳ ತಿಳುವಳಿಕೆ ಇಲ್ಲದೆ ಇದ್ದರೆ ಇನ್ಯಾರು ಹೇಳಲು ಸಾಧ್ಯ ? ಫೀಸು ಕೊಡಲು ಅಶಕ್ತರಾದ ಎಷ್ಟೋ ಜನ ಕೋರ್ಟುಗಳಲ್ಲಿ ಕೇಸುಗಳನ್ನು ನಡೆಸಲು ಹೋಗದೆ ಇರುವಾಗ ಜೈಲಿಗೆ, ಕೋರ್ಟಿಗೆ ಕಳುಹಿಸುವುದನ್ನೂ ಕಂಡಿದ್ದೇವೆ. ಹಾಗಿದ್ದರೆ, ಕಾನೂನು ಕಾನೂನಿನ ವಿಚಾರ, ವಕೀಲರುಗಳ ಸೇವೆ ಕೇವಲ ಶಕ್ತರಿಗೆ ಮಾತ್ರವೇ ಎಂಬ ಸಂಶಯು ಸಮಾಜದಲ್ಲಿ ಮೂಡಿ ಬಂದರೆ ಅದಕ್ಕೆ ಉತ್ತರ ಹೇಳಲು ಕಷ್ಟವಾಗುತ್ತದೆ. ಆದುದರಿಂದ ವಕೀಲರು ತಮ್ಮ ಮೈಚಳಿಯನ್ನು ಬಿಟ್ಟು ಸಮಾಜದಲ್ಲಿ ಪ್ರಮುಖ ಅಂಗವಾದ ತಮ್ಮ ಈ ಸೇವೆಯನ್ನು ಸಲ್ಲಿಸಬೇಕೆಂಬುದೇ ನನ್ನ ಅಭಿಪ್ರಾಯ.

**ಮಾದಂಡ ಸು. ಮುಂದಣ್ಣ**

* * *

● ಆಗಸ್ಟ್ ಸಂಚಿಕೆ ಚೆನ್ನಾಗಿದೆ. ವೆಂಕಟಲಕ್ಷ್ಮಿಯವರ ಲೇಖನ ನನಗಿಷ್ಟವಾಯಿತು.

**ವಿ.ಆರ್. ಪ್ರತಿಭಾ**
ಮದ್ರಾಸ್

● ಶೂದ್ರ ಚೆನ್ನಾಗಿ ಬರುತ್ತಿದೆ. ಪ್ರತಿ ಸಂಚಿಕೆಯಲ್ಲೂ ಹೊಸ ವಿಚಾರಗಳ ಬಗ್ಗೆ ಲೇಖನಗಳಿರುತ್ತವೆ.

**ಡಾ॥ ಬುದ್ದಣ ಹಿಂಗಮಿರೆ**
ಧಾರವಾಡ

● ಬೀದಿ ಮಾತು ಚೆನ್ನಾಗಿದೆ. ಇನ್ನು ತೀವ್ರವಾಗಿ ಬರೆಯಲು ಪ್ರಯತ್ನಿಸಿ.

**ಶಾಮಸುಂದರ ಬಿದಿರ ಕುಂದಿ**
ಗದಗ್

● ವೆಂಕಲಕ್ಷ್ಮಿಯವರ ಲೇಖನ ಓದಿದೆ. ಅದರ ಬಗ್ಗೆ ನನ್ನದೇ ಆದ ಕೆಲವು ಸಂದೇಹಗಳಿವೆ.

**ಶಿವರಾಮ ಕಾಡನ ಕುಪ್ಪೆ**
ಮೈಸೂರು

# ಬೀದಿ ಮಾತು

## ಕೆ.ಎಸ್. ನ. ಮತ್ತು ಆದಾಯ ತೆರಿಗೆ

ಕಳೆದ ತಿಂಗಳು ಒಂದು ಬೆಳ್ಳಿಗೆ ಹೆಚ್.ಎಸ್. ವೆಂಕಟೇಶ ಮೂರ್ತಿಯವರು ಕಿ.ರಂ. ನಾಗರಾಜರವರ ಮನೆಯಲ್ಲಿ ನಾಟಕದ ರೀಡಿಂಗನ್ನ ಇಟ್ಟುಕೊಂಡಿದ್ದರು. ನಾನು ಅಲ್ಲಿಗೆ ಹೋದೆ. ವೆಂಕಟೇಶ ಮೂರ್ತಿಯವರು ಬರಲಿಲ್ಲ. (ಅವರ ಮಗುವಿಗೆ ಅನಾರೋಗ್ಯವಾಗಿತ್ತಂತೆ) ನನ್ನ ಕಾಲದ ಬಹು ಮುಖ್ಯ ನಟಿಯಾದ ಜಯಶ್ರೀ ಬಂದರು. ಅವರ ಜೊತೆಯಲ್ಲಿ ಆನಂದರಾಜ್ ಮತ್ತಿತರರು ಇದ್ದರು. ಹಿಂದೆ ಜಯಶ್ರೀ 'ತಾಯಿ' ನಾಟಕದಲ್ಲಿ ಚೆನ್ನಾಗಿ ಅಭಿನಯಿಸಿದ್ದರು. ನಾನು ಶೂದ್ರಕ್ಕೆ ವಿಮರ್ಶೆ ಮಾಡುವಾಗ ಬೇರೆಯವರಿಗಿಂತ ಜಯಶ್ರೀಯನ್ನು ಕುರಿತು ನಾಲ್ಕು ಮಾತು ಹೆಚ್ಚಾಗಿ ಆಡಿದ್ದೆ. ಇದನ್ನ ಅದರ ಕಮ್ಯುನಿಸ್ಟ್ ನಿರ್ದೇಶಕ ಆಕ್ಷೇಪಿಸಿದ್ದರು—ಜಯಶ್ರೀಯನ್ನ ಯಾಕೆ ಅಷ್ಟು ಹೊಗಳಿದ್ದಿಯಾ ? ಎಂದು. ಮುಂದೆ ಜಯಶ್ರೀ 'ತಾಯಿ'ಯಲ್ಲಿ ಪಾತ್ರವಹಿಸಲಿಲ್ಲ. ಇದಕ್ಕೆ ಕಾರಣಗಳು ಗೊತ್ತಿಲ್ಲ. ನಾನು ಹುಡುಕಿಕೊಂಡು ಹೋಗಲಿಲ್ಲ. ಆದರೆ ಇತ್ತೀಚೆಗೆ ಸಮುದಾಯ ನಾಟಕೋತ್ಸವ ನಡೆಸಿದಾಗ 'ತಾಯಿ' ನಾಟಕವನ್ನು ಬಿಟ್ಟಿದ್ದರು. (ಬಿಡಬಾರದಾಗಿತ್ತು.) ಹೋಗಲಿ ವಿಷಯಕ್ಕೆ ಬರುತ್ತೇನೆ. ನಾಟಕ ಓದದಿದ್ದರೂ ಕನ್ನಡ ರಂಗಭೂಮಿಯನ್ನು ಕುರಿತ ಒಂದಷ್ಟು ಮಾತುಕತೆಗಳಾದುವು. ಅದರಲ್ಲೂ ಕಿ. ರಂ ರವರ ಮನೆಯಿಂದ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಏನೂ ತರದೆ ಹೊರಗೆ ಬಂದರೆ, ದಡ್ಡತನವಾದೀತು. ಎಲ್ಲರೂ ಹೋದರು. ನಮ್ಮ ಚರ್ಚೆ ಸಾಗಿತ್ತು, ಊಟಮಾಡುವಾಗ ಕಿ.ರಂ. ಕೆ.ಎಸ್. ನ ಮಾನಸಿಕವಾಗಿ ಅಸ್ವಸ್ಥರಾಗಿರುವುದನ್ನು ತಿಳಿಸಿದರು. ನನಗೆ ಗಾಭರಿಯಾಯಿತು. ಕೆ.ಎಸ್. ನರಸಿಂಹಸ್ವಾಮಿಯವರನ್ನ ಮೂರು ನಾಲ್ಕು ತಿಂಗಳ ಹಿಂದೆ ಒಂದು ಬೆಳಿಗ್ಗೆ ಲಂಕೇಶರವರ ಮನೆಯಲ್ಲಿ ನೋಡಿದ್ದು. ಪದ್ಯ ಕೇಳಿದೆ. ನನ್ನ ಕಣ್ಣು ಸ್ವಲ್ಪವಾಸಿಯಾಗಲಿ ಕೊಡುವೆನೆಂದರು. ಹಾಗೆಯೇ ಒಂದು ದಿನ ಇಲ್ಲಿ ಪದ್ಯದ ರೀಡಿಂಗನ್ನ ಇಟ್ಟುಕೊಳ್ಳೋಣ ಎಂದರು ಲಂಕೇಶರವರಿಗೆ.

ನಾನು ಮೆಚ್ಚಿಕೊಂಡ ಕವಿ ಕೆ.ಎಸ್ ನ. ಆಸ್ಪತ್ರೆಗೆ ಹೋಗಿ ನೋಡುವ ಮನಸ್ಸಾಯಿತು. ಅವರಿದ್ದುದು 'ಮನಸಾ' ನರ್ಸಿಂಗ್ ಹೋಮಿನಲ್ಲಿ. ಇದೂ ಒಂದು ವ್ಯಾಪಾರ ಕೇಂದ್ರ. ಆದ್ದರಿಂದಲೇ ಸಾವಿರಾರು ರೂಪಾಯಿನ ಬಿಲ್ಲನ್ನ ಕೊಟ್ಟಿದ್ದರು. ಅವರಿದ್ದ ಕೊಠಡಿಯಲ್ಲಿ ಇನ್ನೊಬ್ಬ ವ್ಯಕ್ತಿ ಮಲಗಿದ್ದ. ಆತನ ಹಾಸಿಗೆಯ ಪಕ್ಕದಲ್ಲಿ ಹೆಂಗಸೊಬ್ಬಳು ಮಗುವನ್ನಾಡಿಸುತ್ತ ಕೂತಿದ್ದಳು. ಅಷ್ಟರಲ್ಲಿ ಕೆ.ಎಸ್. ನ ಮಲಗಿದ್ದವರು ಎದ್ದುಕೂತರು. ನಸ್ಯದ ಡಬ್ಬಿಗೆ ಕೈಹಾಕಿದರು. ಕಿ.ರಂ. ನನ್ನ ಹೆಸರನ್ನ ಹೇಳಿದರು.

ಅದ್ಯಾವುದನ್ನು ಅವರು ಗಮನಿಸುವಂತಿರಲಿಲ್ಲ. ಕೆ.ಎಸ್. ನ ಇಲ್ಲಿಗ್ಯಾಕೆ ಬಂದರು? ನಮ್ಮ ರಾಜಕೀಯ ಸಂದರ್ಭ ಎಷ್ಟೊಂದು ಕ್ರೂರವಾಗಿದೆ? ಇವೆಲ್ಲವುಗಳಿಗೆ ಉತ್ತರಗಳು ಅಗೋಚರವಾದದ್ದೇನು ಅಲ್ಲ. ಶೇಷಗಿರಿರಾಯರು—ಗುಂಡೂರಾಯರಿಗೆ ಪತ್ರಿಕಾ ಕಾರ್ಯದರ್ಶಿಯಾದರು. ಯಾಕೆಂದರೆ ಗುಂಡೂರಾಯರಿಗೆ ಆರ್.ಎಸ್. ಎಸ್. ವಿರೋಧಿಯೇನು ಅಲ್ಲ. ಕಮ್ಯುನಿಸ್ಟರು ಅವರ ವಿರೋಧಿಗಳು. ಶೇಷಗಿರಿರಾಯರೂ ಇದಕ್ಕೆ ಬದ್ಧರು. ಆದರೆ ಇದೆಲ್ಲವನ್ನ ತಿಳಿದುಕೊಳ್ಳುವುದರ ಬಗ್ಗೆ ಕೆ.ಎಸ್. ನ ತಲೆ ಕೆಡಿಸಿಕೊಂಡವರಲ್ಲ. ಈ ಕಾರಣಕ್ಕಾಗಿ ಕೆ.ಎಸ್ ನ ಅವರಿಗೆ ಪೋಲೀಸ್ ಭೂತಗಳಾಗಿ ಕೆಲವರು ಕಾಣಿಸಿಕೊಂಡಿರಬಹುದು. ಅದೇನೆ ಇರಲಿ ಕೆ.ಎಸ್. ನ ಗಂಡಾಗುಂಡಿ ಮಾಡಿ ಬದುಕಲು ಪ್ರಯತ್ನಿಸಿದವರಲ್ಲ. ಆಸ್ಪತ್ರೆಯಲ್ಲಿ ನಾನು ಕಂಡದ್ದೆಲ್ಲ ಬರೆಯಲು ಮನಸ್ಸಿಲ್ಲ. ಆದರೆ ಇವರು ತಮ್ಮ ಮಾನಸಿಕ ಅಸ್ವಸ್ಥತೆಯ ನಡುವೆಯೂ ಕಾವ್ಯದ ಸಾಲುಗಳನ್ನು ಮರೆಯುತ್ತಿರಲಿಲ್ಲ. ಕಿ.ರಂ.ರವರ ಒಂದು ಮಾತಿಗೆ "ನಾವೇನು ಕಾವ್ಯ ದಲ್ಲಿ ಪ್ರಯೋಗ ಮಾಡಿದ್ದೀವಿ ? ವೆಸ್ಟ್‌ಗೆ ಕಂಪೇರ್ ಮಾಡಿದರೆ" ಅಂದರು. ಕಾವ್ಯದ ಬಗ್ಗೆ ಇಷ್ಟು ನೆನಪಿರುವ ವ್ಯಕ್ತಿ ತಾವಿರುವ ಆಸ್ಪತ್ರೆಯನ್ನ, ಆಸ್ಪತ್ರೆಯಲ್ಲ ಮನೆಯೆಂದು ತಿಳಿದದ್ದರು, ಒಂದು ಸಾಂಸ್ಕೃತಿಕ ಸಂದರ್ಭವನ್ನು ಶ್ರೀಮಂತಗೊಳಿಸಿದ ಮನುಷ್ಯ ಈ ರೀತಿ ನರಳುತ್ತಿದ್ದರೆ ; ಅದೇ ಕೊಠಡಿಯಲ್ಲಿ ಬಿದ್ದುಕೊಂಡಿದ್ದ ವ್ಯಕ್ತಿಯ ಬದುಕೇ ಬೇರೆಯದಾಗಿತ್ತು. ಆತನ ವಯಸ್ಸು ಸುಮಾರು ಮೂವತ್ತಿರಬಹುದು. ಇಬ್ಬರು ಮಕ್ಕಳು. ಹೆಂಡಿತಿಗೆ ಇಪ್ಪತ್ತೈದು ಎಂದು ಕಾಣುತ್ತೆ. ಹುಡುಗಿಯಾಗಿ ನಲಿದಾಡುವ ಘಳಿಗೆಗಳಿಂದ ದೂರಸರಿದು ಹೆಂಗಸಾಗಿದ್ದಳು. ನಾವು ಆಕೆಯ ಗಂಡನ ಕಾಯಿಲೆ ಯನ್ನು ಕೇಳಿದೆವು. "ನೋಡಿ ಇನ್‌ಕಮ್ ಟ್ಯಾಕ್ಸ್ ಕಟ್ಟದೆ ಸಿಕ್ಕಿಕೊಂಡರು. ಈಗ ಬೀದಿಗೆ ಹೋಗಲು ಭಯಪಡುತ್ತಾರೆ. ಯಾರ ಮುಖವನ್ನು ನೋಡಿದರೂ ಪೋಲಿಸರು ಬಂದರೆಂದು ಭಯಪಡ್ತಾರೆ. ಬೇಕಾದಷ್ಟಿದ್ದರೂ ಇವರು ಟ್ಯಾಕ್ಸ್ ಕಟ್ಟುವುದಿಲ್ಲ. ನನ್ನ ಬದುಕನ್ನೂ ಹಾಳು ಮಾಡ್ತಾರೆ. ಆಕಸ್ಮಾತ್ ಇವರಿಗೇನಾದರೂ ಆದರೆ ಈ ಮಕ್ಕಳನ್ನ ಕಟ್ಟಿಕೊಂಡು ನಾನೇಗಬೇಕು" ಅಂದಳು. ನಾವು ಆಕೆಯನ್ನ ಸಮಾಧಾನ ಪಡಿಸುವುದಕ್ಕೆ "ಏನು ಆಗುವುದಿಲ್ಲ ಬಿಡಿ" ಅಂದೆವು. ನಮ್ಮ ಸಮಾಧಾನಕ್ಕೆ ಯಾವ ಚೇತನವೂ ಇರಲಿಲ್ಲ. ಕೆ.ಎಸ್. ನ ಪಕ್ಕದ ಕೋಣೆಯಲ್ಲಿದ್ದರು. ನಾನು ಮಾತಾಡಿಸುವ ಮನಸ್ಸನ್ನ ಬೆಳೆಸಿಕೊಳ್ಳಲಿಲ್ಲ. ಯಾಕೆಂದರೆ ನಾನು ಇಷ್ಟಪಡುವ ವ್ಯಕ್ತಿಗಳಿಗೆ ಏನೇ ಆಘಾತ ವಾದರೂ ಮಾನಸಿಕವಾಗಿ ಸಹಿಸಲಾರದವನು. ಆದರೆ ಈಗಲೂ ನನ್ನ ಮನಸ್ಸಿಗೆ ಬಡಿಯುವುದು ಕೆ.ಎಸ್. ನ ಅವರ ಕೊಠಡಿಯಲ್ಲಿ ಮಲಗಿದ್ದ ವ್ಯಕ್ತಿ ನಮ್ಮ ರಾಜಕೀಯ ಫಲಿತಾಂಶದ ಬೇರೆ ಬೇರೆ ರೂಪ ಅಂದು ಕೊಳ್ಳುತ್ತೇನೆ. ಇದು ಸುಳ್ಳಾದರೆ ನನ್ನ ತತ್ಕಾಲೀನ ಸಮಾಧಾನಕ್ಕಿರಬಹುದು.

ತಿಂಗಳ ತಿಪ್ಪೆಗುಂಡಿ

## 'ನಾವು ನಾಯಿಗಳು'

ನಮ್ಮ ಕರ್ನಾಟಕದ ಮಾನ್ಯರು (?) ಪತ್ರಿಕೆಯವರನ್ನು 'ನಾಯಿಗಳು' ಎಂದು ಕರೆದಿದ್ದಾರೆ. ಸಂತೋಷದ ವಿಷಯ. ಅವರಿಗೆ ಗೊತ್ತಿರುವುದು ಕೇವಲ ಆ ಶಬ್ದಗಳು ಮಾತ್ರ. ಇದೂ ಅಲ್ಲದೆ ಬಂಗಾಳಕೊಲ್ಲಿ, ಅರಬ್ಬೀ ಸಮುದ್ರ ಇಂಥ ಸುಂದರ ಶಬ್ದಗಳನ್ನು ಬಳಸಿದ್ದಾರೆ. ಅದಕ್ಕಾಗಿ ಈ ಮನುಷ್ಯನಿಗೆ ಋಣಿಯಾಗಿರಬೇಕು. (ದಯವಿಟ್ಟು ಗುಂಡೂರಾಯರು ಅರಬ್ಬೀ ಸಮುದ್ರದ ದಡದಲ್ಲಿ ನಿಂತು ಸುಂದರ ಅಲೆಗಳನ್ನು ನೋಡುತ್ತ ತಮ್ಮ ಕಾರ್ಯಗಳ ಬಗ್ಗೆ ಚಿಂತಿಸಲಿ.)

ಈಗಲೇ ಈ ಜನ ಇಷ್ಟೊಂದು ಕಾರುಬಾರು ಮಾಡುತ್ತಿದ್ದಾರೆ. ಇನ್ನೂ ತುರ್ತುಪರಿಸ್ಥಿತಿಯಂಥ ವೇದಿಕೆ ಸಿಕ್ಕಿದರೆ ಸಾಕು ಮಂಗನಿಗೆ ಹೆಂಡ ಕುಡಿಸಿದಂತೆ ನಡೆದುಕೊಳ್ಳಬಹುದು. ಚರಿತ್ರೆಯಲ್ಲಿ ಇದ್ಯಾವು ನಡೆಯುವುದಿಲ್ಲವೆಂದಲ್ಲ. ಇದು ನಡೆದಂತೆ ಇವರು ಚಿಲ್ಲರೆ ಯಾಗುವುದಿಲ್ಲವೆಂದು ತಿಳಿದಿದ್ದರೆ ಇವರಷ್ಟು ದಡ್ಡರು ಮತ್ಯಾರು ಇರಲಾರರು. ಹಾಗೆಯೇ ಭವಿಷ್ಯದ ಗುಂಡೂರಾಯರಾಗಲು ಕಾಲುಕೆರೆದು ಕೊಂಡು ನಿಂತಿರುವ ನನ್ನ ಕಾಲದ ಗೆಳೆಯರು ಒಳ್ಳೆಯ ನಾಯಕರಾಗಲು ಯಾಕೆ ಪ್ರಯತ್ನಿಸ ಬಾರದು ಅನ್ನಿಸುತ್ತೆ. ಮತ್ತು ಪತ್ರಿಕೆಗಳಿರುವುದು ಹೊಸ ಸಮಾಜದ ಸೃಷ್ಟಿಗಾಗಿಯೇ ವಿನಹ ಸರಕಾರದ ಎಲ್ಲಾ ಕೆಲಸಗಳನ್ನೂ ಹೊಗಳುವುದಕ್ಕಲ್ಲ ಎಂಬುದನ್ನ ಇವರು ಅರಿಯಬೇಕು.



ಕಳೆದ ಸಂಚಿಕೆಯ ಪುಸ್ತಕ ವಿಮರ್ಶೆಯಲ್ಲಿ 30ನೆಯ ಪುಟದ 12ನೆ ಸಾಲಿನ ವಿಷಯ ಎಂಬುದನ್ನು ವಿಷಾದ ಎಂದೂ, 32ನೆಯ ಪುಟದ ಮೋಜಿನ ಎಂಬುದನ್ನು ಪೋಜಿನ ಎಂದೂ ಓದಿಕೊಳ್ಳಿ.

KRNB 214 76-77 No. M. (2) PRB 21 /73-74

J. Sreenivas Murthy,
No. 18, 3rd Cross,
Kodandramapuram,
BANGALORE-3.




*With best compliments from*



DECCAN HERALD
PRAJAVANI
MAYURA
SUDHA

**The Printers (Mysore) Limited**
16, Mahatma Gandhi Road, BANGALORE-560 001

Printed at : SHALIVAHAN PRINTERS, Bangalore-53,
Editor & Publisher : M. SRINIVAS